ಉಪನ್ಯಾಸ ಗ್ರಂಥಮಾಲೆ

೩೮

# ಕನ್ನಡ ಸಾಹಿತ್ಯದಲ್ಲಿ ಜೈನಪುರಾಣಗಳು

ಡಾ. ಸದಾನಂದ ನಾಯಕ, ಎಂ. ಎ., ಪಿಎಚ್. ಡಿ.




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೯೭೫

ರಜತ ಮಹೋತ್ಸವದ ಪ್ರಕಟನೆ
ಉಪನ್ಯಾಸ ಗ್ರಂಥಮಾಲೆ
೩೮

# ಕನ್ನಡ ಸಾಹಿತ್ಯದಲ್ಲಿ ಜೈನಪುರಾಣಗಳು

ಡಾ. ಸದಾನಂದ ನಾಯಕ, ಎಂ. ಎ., ಪಿಎಚ್. ಡಿ.




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಜೂನ, ೧೯೭೫

ಪ್ರಕಾಶಕರು :

ಎಸ್. ಎಸ್. ಒಡೆಯರ ಎಂ. ಎ., ಎಲ್‌ಎಲ್. ಬಿ.
ಕುಲಸಚಿವರು,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ಆಗಸ್ಟ, ೧೯೬೪-೨೦೦೦ ಪ್ರತಿಗಳು
ಪರಿಷ್ಕೃತ ದ್ವಿತೀಯ ಮುದ್ರಣ:ಮೇ ೧೯೬೮-೩೦೦೦ ಪ್ರತಿಗಳು
ತೃತೀಯ ಆವೃತ್ತಿ : ಜೂನ್ ೧೯೭೫-೫೦೦೦ ಪ್ರತಿಗಳು



ಬೆಲೆ: ೨೫ ಪೈಸೆ

ಮುದ್ರಕರು :

ಚ. ಶಿ. ತಡಕೋಡ
ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್,
ಧಾರವಾಡ-೧

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನ ಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಹೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂಥ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೧೪ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೫-೬-೧೯೭೫

ಆರ್. ಸಿ. ಹಿರೇಮಠ
ಕುಲಪತಿ

# ಅರಿಕೆ

(ಪ್ರಥಮ ಮುದ್ರಣ)

"ಕನ್ನಡ ಸಾಹಿತ್ಯದೊಳಗಿನ ಪುರಾಣಕಾವ್ಯಗಳು" ಎಂಬ ಒಂದು ಲೇಖನವನ್ನು ನಾನು ಬಹಳ ಹಿಂದೆ ಬರೆದಿದ್ದೆ. ಅದರೊಳಗಿನ "ವೀರಶೈವ ಪುರಾಣಗಳು" ಎಂಬ ವಿಭಾಗವು ದಿವಂಗತ ಶ್ರೀ ಬಸವನಾಳ ಸ್ಮಾರಕಗ್ರಂಥದಲ್ಲಿ ಪ್ರಕಟವಾದ ಮೇಲೆ, ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣದ ಪರವಾಗಿ ಶಮನೇವಾಡಿಯಲ್ಲಿ "ಜೈನಪುರಾಣ" ಗಳ ವಿಷಯವಾಗಿ ಮಾತನಾಡುವ ಒಂದು ಅವಕಾಶವು ನನಗೆ ದೊರೆಯಿತು. ಆ ವ್ಯಾಖ್ಯಾನವನ್ನೇ ವಿಸ್ತರಿಸಿ ಈ ಪುಟ್ಟ ಪುಸ್ತಿಕೆಯನ್ನು ಸಿದ್ಧಗೊಳಿಸಲಾಗಿದೆ. ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮಾಲೆಯಲ್ಲಿ ಅದನ್ನು ಪ್ರಕಟಿಸುವ ಇಂಥ ಒಂದು ಸಂದರ್ಭವನ್ನು ಕಲ್ಪಿಸಿಕೊಟ್ಟುದಕ್ಕಾಗಿ ವಿಶ್ವವಿದ್ಯಾಲಯದ ಅಧಿಕಾರಿಗಳಿಗೂ ಡಾಯರೆಕ್ಟರರಾದ ಶ್ರೀಮಾನ್ ಚೆನ್ನವೀರ ಕಣವಿಯವರಿಗೂ ನಾನು ಅತ್ಯಂತ ಉಪಕೃತನಾಗಿರುವೆನು.

ಈ ಪುಸ್ತಿಕೆಯು ಕನ್ನಡ ಸಾಹಿತ್ಯದ ಅಭ್ಯಾಸುಗಳಿಗೆ ಒಂದು ಪುಟ್ಟ ಕೈಪಿಡಿಯಂತೆ ನೆರವಾಗಿ, ಜೈನಪುರಾಣಗಳ ಬಗೆಗೆ ಒಂದು ಹೊಸ ದೃಷ್ಟಿಯನ್ನು ಹುಟ್ಟಿಸಬಹುದಾದರೆ, ನನ್ನ ಈ ಅಲ್ಪ ಪ್ರಯತ್ನವು ಸಫಲವಾಗುವುದೆಂದು ನಂಬಿರುವೆನು.

ಸೆಕಂಡರಿ ಟೀಚರ್ಸ ಕಾಲೇಜು,
ಬೆಳಗಾಂವಿ
೨೪-೧೨-೧೯೬೩

ಸದಾನಂದ ನಾಯಕ

## ಪರಿವಿಡಿ


ಅಧ್ಯಾಯ ಪುಟ

೧. ಜೈನಪುರಾಣಗಳ ಪರಂಪರೆ ೧

(೧) ಜೈನರ ಜೀವನದ ಪ್ರಾಚೀನ ಸ್ಮೃತಿಚಿತ್ರಗಳು (೨) ಜೈನಪುರಾಣದ ಉಗಮ (೩) ಜಿನಸೇನಾಚಾರ್ಯರ ಮಹಾಪುರಾಣದ ಪರಂಪರೆ (೪) ಕನ್ನಡ ಸಾಹಿತ್ಯದಲ್ಲಿಯ ಜೈನಪುರಾಣಗಳು.

೨. ಜೈನಪುರಾಣಗಳ ವಸ್ತುವಿಸ್ತಾರ ೧೭

ಅ. ಜೈನಪುರಾಣಗಳ ಅಂಗಗಳು

ಆ. ತೀರ್ಥಂಕರರ ಚರಿತ್ರೆ :

(೧) ಪೂರ್ವಭವಾವಳಿ

(೨) ತೀರ್ಥಂಕರರ ಪಂಚಕಲ್ಯಾಣಗಳು

(೩) ಸಮಯ ನಿರೂಪಣೆ

(೪) ಸಮವಸರಣ

(೫) ಅನಂತಚತುಷ್ಟಯ ವರ್ಣನ

ಇ. ಚಕ್ರವರ್ತಿ–ಕಾಮದೇವರ ಚರಿತ್ರೆಗಳು

೩. ಜೈನಪುರಾಣಗಳ ಕಥೆಗಳ ಸಂಪ್ರದಾಯ ೨೬

ಅ. ಆದಿಪುರಾಣದೊಳಗಿನ ಕಥೆಗಳು :

(೧) ಆದಿತೀರ್ಥಂಕರರ ಪೂರ್ವಭವಾವಳಿ
(೨) ಆದಿತೀರ್ಥಂಕರರ ಇಹಜೀವನ ಚರಿತ್ರೆ
(೩) ಬಾಹುಬಲಿಗಳ ಚರಿತ್ರೆ

ಆ. ಆಗಮಿಕ ರಾಮಾಯಣ ಭಾರತಗಳು :

(೧) ಆಗಮಿಕ (ಜೈನ) ರಾಮಾಯಣ
(೨) ಆಗಮಿಕ ಭಾರತ

೪. ಜೈನಪುರಾಣಗಳಲ್ಲಿ ಧರ್ಮ ಹಾಗೂ ಕಾವ್ಯ ೪೪

(೧) ಪುರಾಣರಚನೆಯಲ್ಲಿ ದ್ವಿವಿಧ ಉದ್ದೇಶ
(೨) ಧರ್ಮಮುಮಂ....
(೩) ಕಾವ್ಯಮುಮಂ....

೫. ಜೈನಪುರಾಣಗಳಲ್ಲಿಯ ಆದರ್ಶ, ದರ್ಶನ ಹಾಗೂ ಸಂದೇಶ ೫೯

(೧) ಜೈನ ಪುರಾಣಗಳಲ್ಲಿಯ ವಿಶ್ವಶಾಂತಿಯ ಆದರ್ಶ
(೨) ಜಿನೇಂದ್ರ ದರ್ಶನ
(೩) ಜೈನಪುರಾಣಗಳ ಸಂದೇಶ

ಅಧ್ಯಾಯ ೧

# ಜೈನಪುರಾಣಗಳ ಪರಂಪರೆ

## (೧) ಜೈನರ ಜೀವನದ ಪ್ರಾಚೀನ ಸ್ಮೃತಿಚಿತ್ರಗಳು

ನೆಱೆದಾದ ವ್ರತಶೀಲ ನೋನ್ಪಿ ಗುಣದಿಂ
ಸ್ವಾಧ್ಯಾಯ ಸಂಪತ್ತಿನಿಂ
ಕಱೆಯಿಲ್ ನಲ್ತಪ ಧರ್ಮದಿಂ ಸಸಿಮತಿ
ಶ್ರೀ ಗಂತಿಯರ್ ವಂದು ಮೇಲ್
ಅಱಿದಾಯುಷ್ಯಮನೆಂತು ನೋಡೆನಗೆ
ತಾನಿಂತೆಂತು ಕಟ್ವಪ್ಪಿನುಳ್
ತೊಱೆದಾರಾಧನೆ ನೋನ್ತು ತೀರ್ಥಗಿರಿಮೇಲ್
ಸ್ವರ್ಗಾಲಯಕ್ಕೇಱಿದಾರ್ ॥

ಅತಿ ಪ್ರಾಚೀನವಾದ ನಿಸದಿಗೆಗಲ್ಲಿನ ಮೇಲೆ ಕಂಡುಬರುವ ಶಿಲಾಶಾಸನದ ಸ್ಮೃತಿಚಿತ್ರವಿದು. ಶ್ರೀಗಂತಿಯರೆಂಬ ಮಹಾ ವ್ರತಿಗಳು ವ್ರತ-ಶೀಲ-ನೋಂಪಿ-ಗುಣ ಸಮೂಹದಿಂದಲೂ ಸ್ವಾಧ್ಯಾಯದ ಸಂಪತ್ತಿನಿಂದಲೂ ಕೂಡಿದವರಾಗಿದ್ದು ತಪೋ ಧರ್ಮನಿರತರಾಗಿದ್ದರೆಂಬುದಕ್ಕೆ ಈ ಶಾಸನವು ಸಾಕ್ಷಿಯನ್ನೀಯು ವುದು. ಅವರು ನೋಂತು ತೀರ್ಥಗಿರಿಯ ಮೇಲೆ ಸ್ವರ್ಗಾಲಯವನ್ನೇರಿದರೆಂಬ ಮಾತು ಮಹತ್ವವಾದುದು. ಇಂಥ ನೋಂಪಿಯ ವಿಧಿಯು ಅನಶನ (ಸಲ್ಲೇಖನ) ವ್ರತ ವೆಂದು ಪ್ರಸಿದ್ಧವಿರುವುದು. ಮುಪ್ಪಿನಿಂದ ಇಲ್ಲವೆ ಇತರ ಬಳಲಿಕೆಗಳಿಂದ ಸಾವು ಸಮೀಪಿಸಿದಾಗ ಪ್ರಾಯೋಪವೇಶನ ಮಾಡಿ ದೇಹವನ್ನು ತ್ಯಜಿಸುವುದೇ ಈ ಮಹಾವ್ರತವು. ಅದನ್ನು ಆಚರಿಸುವುದು ಪರಮಾರ್ಥಕ್ಕೋಸುಗವಲ್ಲದೆ, ಇಹ ಸಂಸಾರದ ಸಿರಿಸಂಪತ್ತುಗಳಿಗಾಗಿ ಅಲ್ಲ.

ಸುರಚಾಪಂಬೋಲೆ ವಿದ್ಯುಲ್ಲತೆಗಳ ವೋಲ್ ತೋಱಿ ಬೇಗಂ
ಪರಿಗುಂ ಶ್ರೀ-ರೂಪ-ಲೀಲಾ-ಧನ-ವಿಭವ
ಮಹಾರಾಶಿಗಳ್ ನಿಲ್ಲವಾರ್ಗಂ
ಪರಮಾರ್ಥಂ ಮೆಚ್ಚೆನಾನೀ ಧರಣಿಯುಳಿರವಾನೆಂದು
ಸನ್ಯಾಸನಂ ಗೆ
ಯ್ದುರು ಸತ್ವನ್ ನಂದಿಸೇನ ಪ್ರವರ ಮುನಿವರನ್
ದೇವಲೋಕಕ್ಕೆ ಸಂದಾನ್ ॥

ಇಹಲೋಕದೊಳಗಿನ ಶ್ರೀ-ರೂಪ-ಲೀಲಾ-ಧನ-ವಿಭವ ಮಹಾರಾಶಿಗಳ ಅನಿತ್ಯತೆಯನ್ನು ಎತ್ತಿ ತೋರಿಸುವ ಮತ್ತೊಂದು ನಿಸದಿಗೆಗಲ್ಲಿನ ಚಿತ್ರವು ಇದು. "ಸ್ವರ್ಗಾಶ್ರಮನೇಱಿದಾರ್," "ಸ್ವರ್ಗಾಲಯಕ್ಕೇಱಿದಾರ್", "ದೇವಲೋಕಕ್ಕೆ ಸಂದಾನ್" "ಮುಡಿಪ್ಪಿದಾರ್" ಎಂದು ಮುಂತಾಗಿ ಮಹಾವ್ರತಿಗಳ ಅಂತ್ಯವನ್ನು ಇವು ವರ್ಣಿಸುವುವು. ಇಂಥ ಅದ್ವಿತೀಯವಾದ ವ್ರತವನ್ನು ಆಚರಿಸಿ ಸಾವಿಗೀಡಾದ ಸಾವಿರಾರು ಸ್ತ್ರೀಪುರುಷರ ಸ್ಮಾರಕವಾದ ನಿಸದಿಗೆಗಲ್ಲುಗಳು ದೇಶದ ತುಂಬೆಲ್ಲ ಕಂಗೊಳಿಸುವುವು.

ಜೈನ ಕ್ಷೇತ್ರಗಳಲ್ಲಿ ಪ್ರಸ್ಥಾಪಿತವಾಗಿರುವ ಅತ್ಯುನ್ನತವಾದ ಗೋಮಟೇಶ್ವರ ಮೂರ್ತಿಗಳನ್ನೂ ಇಲ್ಲಿ ನೆನಸಿಕೊಳ್ಳಬೇಕು. ನಿಸ್ಸೀಮವಾದ ವ್ರತಗಳ ಆಚರಣೆಗೆ ಧರ್ಮದ ಅಧಿಷ್ಠಾನವು ಆವಶ್ಯಕವಾಗಿರುವುದು. ದಯೆ, ದಮ, ದಾನವೇ ಮೊದಲಾದ ಅಂಗಗಳಿಂದ ಕೂಡಿದ ಧರ್ಮವನ್ನು ಆಚರಿಸಿ ಕೃತಕೃತ್ಯರಾದ ಗೊಮ್ಮಟೇಶ್ವರರು ಜೈನಧರ್ಮೀಯರಿಗೆ ಅನುಕರಣೀಯರಾಗಿರುವರು. ಅವರು ಗೊಮ್ಮಟೇಶನಲ್ಲಿ ಬೇಡಿಕೊಳ್ಳುವ ಪ್ರಾರ್ಥನೆ ಇದು:—

ಅಭಿಮಾನ ಸ್ಥಿರಭಾವಮಂ ನಮಗೆ ಮಾಟಿಕ್ಕೆ
ಅತ್ಯುದ್ಧವಾನೋನ್ನತಂ;
ಶುಭಸೌಭಾಗ್ಯಮಂ ಅಂಗಜಂ ಭುಜಬಲಾವಷ್ಟಂಭಮಂ
ಚಕ್ರವ-

ತ್ರಿಭುಜಾದರ್ಪವಿಲೋಪಿ ಬಾಹುಬಲಿ;
ತೃಷ್ಣಾಚ್ಛೇದಮಂ ಮುಕ್ತರಾ-
ಜ್ಯಭವಂ ಮುಕ್ತಿಯಂ ಆಪ್ತ ನಿವೃತ್ತಿಪದಮಂ
ಶ್ರೀ ಗೊಮ್ಮಟೇಶಂ ಜಿನಂ॥

ಇವುಗಳ ಜೊತೆಗೆ, ಜಿನಾಲಯಗಳಲ್ಲಿ ಕಂಡು ಬರುವ ಶಾಂತವೂ, ಶುದ್ಧವೂ ಸ್ಫುರದ್ರೂಪಯುಕ್ತವೂ ಆಗಿರುವ ಜಿನಬಿಂಬಗಳು ಜೈನಧರ್ಮೀಯರಿಗೆ ಪೂಜನೀಯವಾಗಿರುವುವು. ಇವುಗಳ ಆದರ್ಶವೇ ಜೈನಧರ್ಮದ ಆದೇಶವಾಗಿರುವುವೆನ್ನಲು ಏನೂ ಅಡ್ಡಿಯಿಲ್ಲ.

ಇಂಥ ಆದರ್ಶವನ್ನೂ ಅವುಗಳ ಆದೇಶಗಳನ್ನೂ ಎತ್ತಿ ತೋರಿಸುವ ಪ್ರಾಚೀನ ಗ್ರಂಥಗಳೇ ಜೈನಪುರಾಣಗಳು. ಆ ಪುರಾಣಗಳನ್ನು ಅತ್ಯಂತ ಶ್ರದ್ಧೆಯಿಂದ ಅನುಸರಿಸುತ್ತಿದ್ದ ಅನುಯಾಯಿಗಳ ಸ್ಮಾರಕಗಳೇ ಮೇಲಿನ ಸ್ಮೃತಿಚಿತ್ರಗಳಲ್ಲಿ ಚಿರಸ್ಥಾಯಿಯಾಗಿ ನಿಂತಿರುವುವೆಂಬುದನ್ನು ಗಮನಿಸಬೇಕಾಗಿದೆ.

## (೨) ಜೈನಪುರಾಣಗಳ ಉಗಮ

ಜೈನಪುರಾಣಗಳು ಬಹು ಪ್ರಾಚೀನವಾದವುಗಳು. ಜೈನ ಶಾಸ್ತ್ರಗಳನ್ನು ಶ್ರುತಸ್ಕಂಧವೆಂದು ಕರೆಯುವರು. ಅದರಲ್ಲಿ ೪ ವಿಭಾಗಗಳು ಇರುವವು. ಅವುಗಳಿಗೆ ಅನುಯೋಗಗಳೆನ್ನುವರು. ಅವುಗಳಲ್ಲಿ ಮೊದಲನೆಯದು ಧರ್ಮಾನುಯೋಗವು. ಪ್ರಥಮಾನುಯೋಗವೆಂತಲೂ ಅದಕ್ಕೆ ಹೆಸರು. ಜೈನ ಪುರಾಣಗಳೆಲ್ಲವೂ ಇದರಲ್ಲಿ ಒಳಗೊಂಡಿರುವುವು.

ಶ್ರುತಸ್ಕಂಧವನ್ನು ವಿಶ್ರುತಪಡಿಸಿದವರು ತೀರ್ಥಂಕರರು. ಜೈನಪುರಾಣಗಳೂ ತೀರ್ಥಂಕರರ ದಿವ್ಯವಾಣಿಯಿಂದಲೇ ಮೊದಲು ಹೊರಟುವು ಅವುಗಳನ್ನು ಮೊಟ್ಟಮೊದಲು ಗ್ರಹಿಸಿದವರು ಅವರ ಗಣಧರರು. ಕೈಲಾಸ ಪರ್ವತದಲ್ಲಿ ಆದಿ ತೀರ್ಥಂಕರರ ಗಣಧರನಾದ ವೃಷಭಸೇನನು ಭರತ ಚಕ್ರವರ್ತಿಗೆ ಇದನ್ನು ಮೊದಲು ನಿವೇದಿಸಿದನೆಂದೂ, ಕೊನೆಯ ತೀರ್ಥಂಕರರಾದ ವರ್ಧಮಾನರ ಗಣಧರನಾದ ಗೌತಮನು ಮಗಧಾಧಿಪನಾದ ಶ್ರೇಣಿಕನಿಗೆ ವಿಪುಳಾಚಲದಲ್ಲಿ ಅದನ್ನು ತಿಳಿಯಪಡಿಸಿದನೆಂದೂ ಮಹಾಕವಿ ಪಂಪನು ಹೇಳಿರುವನು.

ಜೈನಪುರಾಣಗಳು ಮುಖ್ಯವಾಗಿ ತೀರ್ಥಂಕರರ ಚರಿತ್ರೆಗಳು. ಇಪ್ಪತ್ತುನಾಲ್ಕು ತೀರ್ಥಂಕರರ ಚರಿತ್ರೆಗಳನ್ನೂ ಅವು ಒಳಗೊಂಡಿರುವುವು ಅವರ ಕಾಲಾವಧಿಯಲ್ಲಿ ಬರುವ ಇತರ ಮಹಾಪುರುಷರ ಚರಿತ್ರೆಗಳನ್ನೂ ಅವು ಒಳಗೊಂಡಿರುವುವು. ಆ ಮಹಾಪುರುಷರೆಂದರೆ : ೧೨ ಚಕ್ರವರ್ತಿಗಳು, ೯ ಬಲದೇವರು, ೯ ವಾಸುದೇವರು ಮತ್ತು ೯ ಪ್ರತಿವಾಸುದೇವರು.

ತೀರ್ಥಂಕರರನ್ನೊಳಗೊಂಡು ಇವರೆಲ್ಲ ಒಟ್ಟಿಗೆ ೬೩ ಮಹಾ ಪುರುಷರಿರುವರು.[೧] ಇವರಿಗೆ ಅರವತ್ತುಮೂವರು ಶಲಾಕಾ ಪುರುಷರೆಂದು ಕರೆಯುವುದು ವಾಡಿಕೆಯಾಗಿರುವುದು.

ವೈದಿಕ ಸಾಹಿತ್ಯದಂತೆ ಜೈನಶಾಸ್ತ್ರಗಳಾದರೂ ಮೊದ-ಮೊದಲು ಪಾಠ್ಯಗಳಾಗಿ ಬಾಯಿಂದ ಬಾಯಿಗೆ ಅಥವಾ ಶ್ರುತಿಗಳಾಗಿ ಕಿವಿಯಿಂದ ಕಿವಿಗೆ ಸಾಗುತ್ತಲೇ ಬಂದುವು. ತೀರ್ಥಂಕರರಿಂದ ಕೇವಲಿಗಳೂ, ಶ್ರುತಕೇವಲಿಗಳೂ, ಆಚಾರ್ಯರೂ, ಅಂಗಧಾರಿಗಳೂ ಪುರಾಣಗಳೆಲ್ಲವನ್ನೂ ಶ್ರುತಿಪುರಸ್ಸರವಾಗಿ ಕಾಪಾಡಿಕೊಂಡು ಬಂದರು. ಸಮಂತಭದ್ರ ಕವಿಪರಮೇಷ್ಠಿ, ಪೂಜ್ಯಪಾದರು ಕರ್ನಾಟಕದಲ್ಲಿ ಜೈನಪುರಾಣಗಳ

---

೧. ಅರವತ್ತುಮೂವರು ಶಲಾಕಾಪುರುಷರ ಹೆಸರುಗಳು ಇಂತಿವೆ:

(ಅ) ೨೪ ತೀರ್ಥಂಕರರು

| | | |
|---|---|---|
| ೧. ವೃಷಭ | ೨. ಅಜಿತ | ೩. ಶಂಭವ |
| ೪. ಅಭಿನಂದನ | ೫. ಸುಮತಿ | ೬. ಪದ್ಮಪ್ರಭ |
| ೭. ಸುಪಾರ್ಶ್ವ | ೮. ಚಂದ್ರಪ್ರಭ | ೯. ಪುಷ್ಪದಂತ |
| ೧೦. ಶೀತಲ | ೧೧. ಶ್ರೇಯಾಂಸ | ೧೨. ವಾಸುಪೂಜ್ಯ |
| ೧೩. ವಿಮಲ | ೧೪. ಅನಂತ | ೧೫. ಧರ್ಮ |
| ೧೬. ಶಾಂತಿ | ೧೭. ಕುಂಥು | ೧೮. ಅರ |
| ೧೯. ಮಲ್ಲಿ | ೨೦. ಮುನಿಸುವ್ರತ | ೨೧ ನಮಿ |
| ೨೨. ನೇಮಿ | ೨೩. ಪಾರ್ಶ್ವ | ೨೪. ವರ್ಧಮಾನ |

ಆದ್ಯ ಪುರಸ್ಕರ್ತರಾಗಿರುವರು. ಇವರ ಶಿಷ್ಯಪರಂಪರೆಯಲ್ಲಿ ವೀರಸೇನಾಚಾರ್ಯರೆಂಬವರು ಪ್ರಮುಖರಾಗಿರುವರು. ಇವರ ಶಿಷ್ಯರಾದ ಜಿನಸೇನಾಚಾರ್ಯರು ಸಂಸ್ಕೃತದಲ್ಲಿ ಬರೆದ ಪೂರ್ವಪುರಾಣವೇ ಈಗ ಉಪಲಬ್ಧವಾಗಿರುವ ಜೈನಪುರಾಣಗಳಲ್ಲಿ ಮೊದಲನೆಯದಾಗಿರುವುದು.

---

(ಅ) ೧೨ ಚಕ್ರವರ್ತಿಗಳು

| | | |
|---|---|---|
| ೧. ಭರತ | ೨. ಸಗರ | ೩. ಮಘವ |
| ೪. ಸನತ್ಕುಮಾರ | ೫. ಶಾಂತಿ | ೬. ಕುಂಥು |
| ೭ ಅರ | ೮. ಸುಭೌಮ | ೯. ಮಹಾಪದ್ಮ |
| ೧೦. ಹರಿಷೇಣ | ೧೧. ಜಯಸೇನ | ೧೨. ಬ್ರಹ್ಮದತ್ತ |

(ಇ) ೯ ಬಲದೇವರು

| | | |
|---|---|---|
| ೧. ವಿಜಯ | ೨. ಅಚಲ | ೩. ಧರ್ಮಪ್ರಭ |
| ೪. ಸುಪ್ರಭ | ೫. ಸುದರ್ಶನ | ೬. ನಂದಿಷೇಣ |
| ೭. ನಂದಿಮಿತ್ರ | ೮. ರಾಮಚಂದ್ರ | ೯. ಪದ್ಮ |

(ಈ) ೯ ವಾಸುದೇವರು

| | | |
|---|---|---|
| ೧, ತ್ರಿಪುಷ್ಟ | ೨, ದ್ವಿಪುಷ್ಟ | ೩. ಸ್ವಯಂಭೂ |
| ೪. ಪುರುಷೋತ್ತಮ | ೫. ನರಸಿಂಹ | ೬. ಪುಂಡರೀಕ |
| ೭. ದತ್ತದೇವ | ೮. ಲಕ್ಷ್ಮಣ | ೯. ಕೃಷ್ಣ |

(ಉ) ೯ ಪ್ರತಿವಾಸುದೇವರು

| | | |
|---|---|---|
| ೧. ಅಶ್ವಗ್ರೀವ | ೨. ತಾರಕ | ೩. ಮೇರಕ |
| ೪. ನಿಕುಂಭ | ೫. ಮಧುಕೈಟಭ | ೬. ಪ್ರಲ್ಹಾದ |
| ೭. ಬಲಿ | ೮. ರಾವಣ | ೯. ಜರಾಸಂಧ |

## (೩) ಜಿನಸೇನಾಚಾರ್ಯರ ಮಹಾಪುರಾಣದ ಪರಂಪರೆ

ಜಿನಸೇನಾಚಾರ್ಯರು ರಾಷ್ಟ್ರಕೂಟ ಅರಸನಾದ ನೃಪತುಂಗನ ಪರಮ ಗುರುಗಳು. ಒಂಬತ್ತನೆಯ ಶತಮಾನದ ಆರಂಭದಲ್ಲಿ ಇದ್ದರೆನ್ನಬಹುದು. ಅವರು ೬೩ ಶಲಾಕಾಪುರುಷರ ಚರಿತ್ರೆಗಳನ್ನು ಒಳಗೊಂಡ ಮಹಾಪುರಾಣವನ್ನು ಬರೆಯಲು ಉದ್ಯಮಿಸಿದರು. ಆದರೆ ಅವರಿಂದ ಆ ಕಾರ್ಯವು ಕೊನೆಗಾಣಲಿಲ್ಲ. ೪೨ ಸಂಧಿಗಳನ್ನಷ್ಟೇ ಬರೆಯುವಷ್ಟರಲ್ಲಿ ಅವರ ಕಾಲಾವಸಾನವಾಯಿತು. ಅವರು ಬರೆದು ಮುಗಿಸಿದ ಭಾಗವು ಪೂರ್ವಪುರಾಣ ಅಥವಾ ಆದಿಪುರಾಣವೆಂದು ಪ್ರಸಿದ್ಧವಾಯಿತು: ಅವರು ಯೋಜಿಸಿದ ಮಹಾಪುರಾಣದ ಮುಂದಿನ ಭಾಗವನ್ನು ೬೦ ಸಂಧಿಗಳಿಂದ ಕೂಡಿದ ಉತ್ತರಪುರಾಣವೆಂದು ಅವರ ಶಿಷ್ಯರಾದ ಗುಣಭದ್ರಾಚಾರ್ಯರು ಸು. ಕ್ರಿ. ಶ. ೮೯೮ ರಲ್ಲಿ ಬಂಕಾಪುರದಲ್ಲಿ ಪೂರ್ತಿಗೊಳಿಸಿದರು. ಒಟ್ಟಿಗೆ ೧೦೨ ಸಂಧಿಗಳುಳ್ಳ ಈ ಮಹಾಪುರಾಣವು ಸಂಸ್ಕೃತ ಭಾಷೆಯಲ್ಲಿ ಮೊಟ್ಟಮೊದಲು ಕರ್ನಾಟಕದಲ್ಲಿಯೇ ಪ್ರಕಟವಾಯಿತು.

೬೩ ಶಲಾಕಾ ಪುರುಷರ ಚರಿತ್ರೆಗಳನ್ನು ಒತ್ತಟ್ಟಿಗೆ ವಿವರಿಸುವ ಗ್ರಂಥಕ್ಕೆ ಮಹಾಪುರಾಣವೆನ್ನುವರೆಂತಲೂ, ಒಬ್ಬ ತೀರ್ಥಂಕರರ ಚರಿತ್ರೆಯನ್ನೇ ಬೇರೆಯಾಗಿ ಹೇಳುವುದಾದರೆ ಅದಕ್ಕೆ ಇತಿಹಾಸವೆನ್ನಬೇಕೆಂತಲೂ ಪ್ರಭಾಚಂದ್ರರೆಂಬ ಆಚಾರ್ಯರು ಹೇಳಿರುವರು. ಆದರೆ, ಕನ್ನಡ ಸಾಹಿತ್ಯದಲ್ಲಿ ಜೈನ ಪುರಾಣವೆಂದನಿಸಿದವುಗಳೆಲ್ಲವೂ ಒಬ್ಬೊಬ್ಬ ತೀರ್ಥಂಕರರ ಚರಿತ್ರೆಗಳೇ ಆಗಿರುವವು. ಅವೆಲ್ಲವುಗಳಿಗೆ ಆಧಾರವಾಗಿರುವ

ಮೂಲಗ್ರಂಥವೆಂದರೆ ಜಿನಸೇನ-ಗುಣಭದ್ರಾಚಾರ್ಯರ ಈ ಸಂಸ್ಕೃತ ಮಹಾಪುರಾಣವೇ ಆಗಿರುವುದು.

ಹತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕನ್ನಡದ ಆದಿ ಕವಿಯಾದ ಮಹಾಕವಿ ಪಂಪನು ಜಿನಸೇನಾಚಾರ್ಯರ ಪೂರ್ವ ಪುರಾಣವನ್ನು ಆದಿಪುರಾಣವೆಂದು ಪರಿವರ್ತಿಸಿ ಜೈನ ಪುರಾಣ ಗಳಿಗೂ ಕನ್ನಡದಲ್ಲಿ ಆದಿಕವಿಯಾದನು. ಇದರಲ್ಲಿ ವರ್ಣಿತ ವಾಗಿರುವುದು ಆದಿತೀರ್ಥಂಕರನಾದ ವೃಷಭದೇವರ ಚರಿತ್ರವು. ಅವನ ತರುವಾಯ ಕಾಲು ಶತಮಾನದೊಳಗೇ ಪೊನ್ನನು ಶಾಂತಿಪುರಾಣವನ್ನು ಬರೆದನು. ರನ್ನನು ಅಜಿತಪುರಾಣ ವನ್ನು ಬರೆದುದು ಈ ಶತಮಾನದ ಕೊನೆಯ ಭಾಗದಲ್ಲಿ. ಈ ಮೂವರು ಮಹಾಕವಿಗಳನ್ನು ಪುರಾಣ ಕವಿಗಳೆಂದೂ ರತ್ನ ತ್ರಯರೆಂದೂ ಇತರ ಕವಿಗಳು ಹೊಗಳುವುದು ವಾಡಿಕೆಯಾಗಿದೆ.

ಆದರೆ, ಜಿನಸೇನ-ಗುಣಭದ್ರಾಚಾರ್ಯರ ಸಂಸ್ಕೃತ ಮಹಾಪುರಾಣವನ್ನು ಸಮಗ್ರವಾಗಿ ಭಾಷಾಂತರಿಸಿದವರೆಂದರೆ ಇಬ್ಬರೇ ಮಹನೀಯರು. ಮೊದಲನೆಯವರೆಂದರೆ ಪುಷ್ಪದಂತ ಮಹಾಕವಿ. ಈ ಮಹಾಕವಿಯು ರಾಷ್ಟ್ರಕೂಟರ ರಾಜಧಾನಿ-ಯಾದ ಮಾನ್ಯಖೇಟ (ಮಳಖೇಡ)ದಲ್ಲಿ, ದಂಡನಾಯಕನಾದ ಭರತನೆಂಬುವನ ಆಶ್ರಯದಲ್ಲಿ ನಿಂತು ಮಹಾಪುರಾಣವನ್ನು ಅಪಭ್ರಂಶ ಭಾಷೆಯಲ್ಲಿ ರಚಿಸಿದನು. ಅದೂ ೧೦೨ ಸಂಧಿ-ಗಳುಳ್ಳ ಮಹಾಕಾವ್ಯವಾಗಿರುವುದು. ಅದನ್ನು ರಚಿಸಿದುದು ಹತ್ತನೆಯ ಶತಮಾನದ ಉತ್ತರಾರ್ಧದಲ್ಲಿ, ಸುಮಾರು ೯೫೫-೯೭೦ ರ ನಡುವೆ.

ಶ್ರವಣಬೆಳುಗೊಳದ ಗೊಮ್ಮಟೇಶ್ವರನನ್ನು ಸ್ಥಾಪಿಸಿದ ಚಾವುಂಡರಾಯರೇ ಎರಡನೆಯವರು. ಅವರು ಮಹಾಪುರಾಣ ವನ್ನು ಕನ್ನಡ ಗದ್ಯದಲ್ಲಿ ರಚಿಸಿರುವರು. ಇದಕ್ಕೆ ಅವರು "ತ್ರಿಷಷ್ಟಿ ಲಕ್ಷಣ ಮಹಾಪುರಾಣ"ವೆಂದು ಕರೆದಿರುವರು. "ಚಾವುಂಡರಾಯ ಪುರಾಣ"ವೆಂತಲೂ ಇದಕ್ಕೆ ಹೆಸರಿದೆ. ಇದರ ರಚನೆಯ ಕಾಲ ಕ್ರಿ. ಶ. ೯೭೮ ಎಂದು ಗಣಿಸಲಾಗಿದೆ.

ಸಂಸ್ಕೃತದಲ್ಲಿ ಜಿನಸೇನ–ಗುಣಭದ್ರಾಚಾರ್ಯರ ಮಹಾ-ಪುರಾಣವಲ್ಲದೆ, ಹೇಮಚಂದ್ರನ "ತ್ರಿಷಷ್ಟಿಶಲಾಕಾಪುರುಷ ಗುಣಾಲಂಕಾರ" ವೆಂಬ ಮಹಾಕಾವ್ಯವೂ ಇದೆ. ಹೇಮ-ಚಂದ್ರನು ಗುರ್ಜರ ಚಾಲುಕ್ಯರ ಆಸ್ಥಾನದೊಳಗಿನ ಮಹಾ-ಪಂಡಿತನಾಗಿದ್ದನು. ಅವನ ಕಾಲ ೧೨ ನೆಯ ಶತಮಾನ. ಆದರೆ ಇವೆರಡು ಮಹಾ–ಪುರಾಣಗಳಲ್ಲಿಯೂ ವ್ಯತ್ಯಾಸವಿದೆ. ಮೊದಲನೆಯದು ದಿಗಂಬರ ಸಂಪ್ರದಾಯಕ್ಕೆ ಅನುಗುಣವಾದುದು, ಎರಡನೆಯದು ಶ್ವೇತಾಂಬರ ಸಂಪ್ರದಾಯಕ್ಕೆ ಸೇರಿ-ದುದು. ಹೀಗಿರುವುದರಿಂದ ಅವು ವಸ್ತು–ವಿನ್ಯಾಸಗಳಲ್ಲಿ ವ್ಯತ್ಯಾಸವನ್ನೊಳಗೊಂಡವುಗಳಾಗಿರುವುವು.

ಸಮಗ್ರ ಮಹಾಪುರಾಣದ ಪರಂಪರೆ ಇಲ್ಲಿ ನಿಲ್ಲುತ್ತದೆ. ಆದರೆ ಜಿನಸೇನನ ಪೂರ್ವಪುರಾಣದ ಅನುವಾದಗಳು ಇನ್ನೂ ಎರಡು ದೊರೆಯುವವು. ಮೊದಲನೆಯದು ಹಸ್ತಿಮಲ್ಲನ ಆದಿಪುರಾಣ; ಅದು ಆದಿಪುರಾಣದ ಗದ್ಯಾನುವಾದ (ಕನ್ನಡ); ಮತ್ತು ಎರಡನೆಯದು ಅರ್ಹದ್ದಾಸನ ಪುರುದೇವ ಚಂಪು (ಸಂಸ್ಕೃತ). ಜಿನಸೇನನ ಸಮಕಾಲೀನನಾದ ಅಸಗನೆಂಬ ಕವಿಯು ಪ್ರತ್ಯೇಕವಾಗಿ ಸಂಸ್ಕೃತದಲ್ಲಿ ವರ್ಧಮಾನಪುರಾಣವೆಂಬ ಕಾವ್ಯ-ವನ್ನು ರಚಿಸಿದ್ದನೆಂಬುದೂ ಉಲ್ಲೇಖನೀಯವಾಗಿರುವುದು.

## (೪) ಕನ್ನಡ ಸಾಹಿತ್ಯದಲ್ಲಿ ಜೈನಪುರಾಣಗಳು

ಕನ್ನಡ ಸಾಹಿತ್ಯದಲ್ಲಿಯ ಜೈನಪುರಾಣಗಳು ಬೇರೆ ಬೇರೆ ತೀರ್ಥಂಕರರ ಚರಿತ್ರಗಳಾಗಿರುವವು. ಅವುಗಳ ಅಂತರ್ಗತ-ವಾಗಿ ಚಕ್ರವರ್ತಿಗಳ ಚರಿತ್ರೆಗಳೂ, ವಾಸುದೇವ-ಬಲದೇವರೇ ಮೊದಲಾದವರ ಚರಿತ್ರೆಗಳೂ ಬರುವವು. ಆದರೆ ಅವೆಲ್ಲವುಗಳಿಗೆ ಮೂಲವೆಂದರೆ ಜಿನಸೇನ-ಗುಣಭದ್ರಾಚಾರ್ಯರ ಮಹಾ-ಪುರಾಣವೇ ಆಗಿರುವುದು. ತೀರ್ಥಂಕರರ ಚರಿತ್ರೆಗಳಲ್ಲದೆ ಬೇರೆಯಾಗಿರುವ ಪುರಾಣ ಚರಿತ್ರೆಗಳೆಂದರೆ : ರಾಮಚಂದ್ರಚರಿತ ಪುರಾಣ ಹಾಗು ಭಾರತ. ಭರತ-ಬಾಹುಬಲಿಗಳ ಚರಿತ್ರೆಯೂ ಕೆಲವು ಸಲ ಸ್ವತಂತ್ರ ಕಾವ್ಯವಾಗಿ ಕಾಣಿಸಿಕೊಳ್ಳುವುದು.

ಕನ್ನಡ ಸಾಹಿತ್ಯದೊಳಗೆ ರಚಿತವಾದ ಮುಖ್ಯವಾದ ಜೈನ ಪುರಾಣಗಳ ಪಟ್ಟಿಯನ್ನು ಕಾಲಾನುಕ್ರಮವಾಗಿ ಮುಂದೆ ಕಾಣಿಸಿದೆ.

## ಅ. ತೀರ್ಥಂಕರರ ಪುರಾಣಗಳು

| ಅ.ನಂ. | ಪುರಾಣಗಳ ಹೆಸರು : | ಕವಿ ಮತ್ತು ಕಾಲ : | ಕಾವ್ಯಪ್ರಕಾರ : |
|---|---|---|---|
| ೧ | ಆದಿಪುರಾಣ | ಪಂಪ (ಕ್ರಿ. ಶ. ೯೪೦) | ಚಂಪೂಕಾವ್ಯ |
| ೨ | ಶಾಂತಿಪುರಾಣ | ಪೊನ್ನ (ಕ್ರಿ. ಶ. ೯೫೦) | ,, |
| ೩ | ಚಾವುಂಡರಾಯಪುರಾಣ | ಚಾವುಂಡರಾಯ (ಸು. ೯೭೮) | ಗದ್ಯಕಾವ್ಯ |
| ೪ | ಅಜಿತ ಪುರಾಣ | ರನ್ನ (ಕ್ರಿ. ಶ. ೯೯೨) | ಚಂಪೂಕಾವ್ಯ |
| ೫ | ಮಲ್ಲಿನಾಥ ಪುರಾಣ | ನಾಗಚಂದ್ರ, (ಸು. ೧೧೦೫) | ,, |
| ೬ | ನೇಮಿನಾಥ ಪುರಾಣ | ಕರ್ಣಪಾರ್ಯ (ಸು. ೧೧೪೦) | ,, |
| ೭ | ನೇಮಿನಾಥ ಪುರಾಣ | ನೇಮಿಚಂದ್ರ (ಸು. ೧೧೭೦) | ,, |
| ೮ | ಚಂದ್ರಪ್ರಭ ಪುರಾಣ | ಅಗ್ಗಳ (ಸು. ೧೧೮೯) | ,, |
| ೯ | ವರ್ಧಮಾನ ಪುರಾಣ | ಆಚಣ್ಣ (ಸು. ೧೧೯೫) | ,, |
| ೧೦ | ಹರಿವಂಶಾಭ್ಯುದಯ | ಬಂಧುವರ್ಮ (ಸು. ೧೨೦೦) | ,, |
| ೧೧ | ಪಾರ್ಶ್ವನಾಥ ಪುರಾಣ | ಪಾರ್ಶ್ವಪಂಡಿತ (ಸು. ೧೨೦೫) | ಚಂಪೂಕಾವ್ಯ |

| | | | |
|---|---|---|---|
| ೧೨ | ಅನಂತನಾಥ ಪುರಾಣ | ಜನ್ನ (ಕ್ರಿ. ಸ. ೧೨೩೦) | ಚಂಪೂಕಾವ್ಯ |
| ೧೩ | ಪುಷ್ಪದಂತ ಪುರಾಣ | ೨ನೆಯ ಗುಣವರ್ಮ (ಸು. ೧೨೩೫) | ,, |
| ೧೪ | ಶಾಂತೀಶ್ವರ ಪುರಾಣ | ಕಮಲಭವ (ಸು. ೧೨೩೫) | ,, |
| ೧೫ | ನೇಮಿನಾಥ ಪುರಾಣ | ಮಹಾಬಲಕವಿ (ಸು. ೧೨೫೪) | ,, |
| ೧೬ | ಆದಿಪುರಾಣ | ಹಸ್ತಿಮಲ್ಲ (ಸು. ೧೩೦೦) | ಗದ್ಯ |
| ೧೭ | ಧರ್ಮನಾಥ ಪುರಾಣ | ಬಾಹುಬಲಿಪಂಡಿತ (೧೩೫೦) | ಚಂಪೂಕಾವ್ಯ |
| ೧೮ | ಧರ್ಮನಾಥ ಪುರಾಣ | ಮಧುರ (ಸು. ೧೩೮೫) | ,, |
| ೧೯ | ನೇಮಿಜಿನೇಶ ಸಂಗತಿ | ೩ನೆಯ ಮಂಗರಸ (೧೫೦೮) | ಕಾವ್ಯ (ಸಾಂಗತ್ಯ) |
| ೨೦ | ಶಾಂತಿನಾಥ ಚರಿತ್ರೆ | ಶಾಂತಿಕೀರ್ತಿಮುನಿ (೧೫೨೮) | ಕಾವ್ಯ (ಷಟ್ಪದಿ) |
| ೨೧ | ವರ್ಧಮಾನ ಚರಿತ್ರೆ | ಪದ್ಮಕವಿ (೧೫೨೮) | ಕಾವ್ಯ (ಷಟ್ಪದಿ) |
| ೨೨ | ಚಂದ್ರ ಪ್ರಭ ಚರಿತೆ | ದೊಡ್ಡಯ್ಯ (ಸು. ೧೫೫೦) | ಕಾವ್ಯ (ಸಾಂಗತ್ಯ) |
| ೨೩ | ಚಂದ್ರಪ್ರಭ ಷಟ್ಪದಿ | ದೊಡ್ಡಣಾಂಕ (೧೫೭೮) | ಕಾವ್ಯ (ಷಟ್ಪದಿ) |

## ಆ. ಇತರ ಆಗಮಿಕ ಪುರಾಣಗಳು

| ಅ ಸಂ. | ಪುರಾಣಗಳ ಹೆಸರು : | ಕವಿ ಮತ್ತು ಕಾಲ : | | ಕಾವ್ಯ ಪ್ರಕಾರ |
|---|---|---|---|---|
| ೧ | ರಾಮಚಂದ್ರಚರಿತ ಪುರಾಣ | ನಾಗಚಂದ್ರ | (ಸು. ೧೧೦೫) | ಚಂಪೂಕಾವ್ಯ |
| ೨ | ಸಾಳ್ವ ಭಾರತ | ಕವಿ ಸಾಳ್ವ | (೧೫೫೦) | ಕಾವ್ಯ (ಷಟ್ಪದಿ) |
| ೩ | ಭರತೇಶ ವೈಭವ | ರತ್ನಾಕರವರ್ಣಿ | (೧೫೫೭) | ಕಾವ್ಯ (ಸಾಂಗತ್ಯ) |
| ೪ | ಜಿನ ಭಾರತ | ಬ್ರಹ್ಮಣಾಂಕ | (೧೭೦೦) | ಕಾವ್ಯ (ಷಟ್ಪದಿ) |
| ೫ | ರಾಮಕಥಾವತಾರ | ದೇವಚಂದ್ರ | (೧೮೦೦) | ಚಂಪೂಕಾವ್ಯ |

ಗುಣಭದ್ರಾಚಾರ್ಯರಿಗೆ ಸಮಕಾಲೀನನಾದ ಮೊದಲ ನೆಯ ಗುಣವರ್ಮನು "ಹರಿವಂಶ" ವೆಂಬ ಜೈನಪುರಾಣವನ್ನು ಬರೆದಿರುವಂತೆ ತಿಳಿದು ಬರುತ್ತದೆ. ಬಹುಶಃ ಅವನಿಗಿಂತ ಹಿಂದಿನವನಾದ ಶ್ರೀವಿಜಯನೂ "ಚಂದ್ರಪ್ರಭ ಪುರಾಣ"ವನ್ನು ಬರೆದಿರುವನೆಂದು ಊಹೆಯಿದೆ. ಆದರೆ ಅವರ ಗ್ರಂಥಗಳು ಉಪಲಬ್ಧವಾಗಿರುವುದಿಲ್ಲ. "ಅನಂತನಾಥ ಪುರಾಣ" ದಲ್ಲಿ ಜನ್ನನು ತನಗಿಂತ ಹಿಂದಿನ ಸುಪ್ರಸಿದ್ಧರಾದ ಪುರಾಣಕವಿಗಳನ್ನು ಸ್ತುತಿಸಿರುವುದನ್ನು ಕೆಳಗಿನ ಪದ್ಯದಲ್ಲಿ ಕಾಣಬಹುದು:-

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ,
ಪಂಪನಿಂಪು, ಪೊ-
ನ್ನನ ಬಗೆ, ನಾಗವರ್ಮನ ಬಹುಜ್ಞತೆ, ರನ್ನನ
ಕಾಂತಿ, ನಾಗಚಂ-
ದ್ರನ ರಸಭಾವಂ, ಅಗ್ಗಳನ ವಕ್ರತೆ, ನೇಮಿಯ
ದೇಸೆ, ಪುಷ್ಪಬಾ-
ಣನ ಮೃದುಬಂಧಂ: ಈ ಕವಿಗಳಲ್ತೆ
ಜಿನೇಂದ್ರ ಪುರಾಣ ಕರ್ತೃಗಳ್ ॥

ಅದೇ ಪ್ರಕಾರವಾಗಿ "ಧರ್ಮನಾಥ ಪುರಾಣ" ದಲ್ಲಿ ಮಧುರನು ತಾನು ಅನುಸರಿಸಿರುವೆನೆಂದು ಹೇಳಿರುವ ಪುರಾಣ ಕವಿಗಳ ಹೆಸರುಗಳು ಕೆಳಗಿನಂತೆ ಇವೆ:-

ಕವಿತಾಶ್ರೀಗೆ ಜನಾರ್ದನಂ, ಪುರುಷರತ್ನಂ,
ಪುಷ್ಪದಂತಂ, ರಿಪು
ಪ್ರವರೋತ್ತುಂಗ ಗಜಾಂಕುಶಂ. ಮನಸಿಜಾಕಾರಂ,
ಸಭಾಮಧ್ಯಲ-

ಬ್ಧವರ ಶ್ರೀವಿಜಯಂ, ಸಮಸ್ತ ಸುಜನೋತ್ತಂಸಂ,
ಯಶಶ್ಚಂದ್ರನು
ತ್ಸವ ಲೀಲಾರಥ ನೇಮಿಯೆಂದು ಮಧುರಂ ಪೆತ್ತಂ
ಮಹಾಖ್ಯಾತಿಯಂ ॥

ಜಿನಸೇನನಿಂದ ಪ್ರಾರಂಭವಾದ ಪುರಾಣರಚನೆಯ ಪರಂಪರೆಯು ಇಂತು ಮಧುರನಿಂದ ಮುಂದೆ ಸಾಗಿ ದೇವಚಂದ್ರನ ವರೆಗೂ ನಡೆದು ಬಂದಿರುವುದನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಾವು ಕಾಣಬಹುದು. ಮೇಲೆ ನಿರ್ದೇಶಿಸಿದ ಕವಿಗಳೆಲ್ಲರೂ ಜಿನೇಂದ್ರ ಪುರಾಣ ಕರ್ತೃಗಳೇ ಆಗಿರುವರು. ಸುಮಾರು ಹದಿನಾಲ್ಕನೆಯ ಶತಮಾನದ ಕೊನೆಯುವರೆಗಿನ ಜೈನಪುರಾಣಗಳು ವಸ್ತುಕ (ಚಂಪೂ) ಕಾವ್ಯಗಳಾಗಿಯೂ, ಮುಂದಿನವುಗಳು ವರ್ಣಕ (ಷಟ್ಪದೀ-ಸಾಂಗತ್ಯ) ರೂಪವಾಗಿಯೂ ಇರುವುವೆಂಬುದನ್ನು ಲಕ್ಷ್ಯದಲ್ಲಿ ಇಡಬಹುದಾಗಿದೆ.

ಅಧ್ಯಾಯ ೨

# ಜೈನಪುರಾಣಗಳ ವಸ್ತುವಿಸ್ತಾರ

## ಅ. ಜೈನಪುರಾಣಗಳ ಅಂಗಗಳು

ಜೈನಪುರಾಣಗಳು ಆಗಮಿಕ ಕಾವ್ಯಗಳಾಗಿರುವುವೆಂಬುದನ್ನು ಲಕ್ಷ್ಯದಲ್ಲಿ ಇಟ್ಟುಕೊಳ್ಳಬೇಕು. ಅಭಿನವ ಪಂಪನ "ರಾಮಚಂದ್ರ ಚರಿತ ಪುರಾಣ" ಹಾಗೂ ಕವಿ ಸಾಳ್ವನ "ಸಾಳ್ವ ಭಾರತ"ಗಳನ್ನು ಬಿಟ್ಟರೆ, ಉಳಿದವುಗಳೆಲ್ಲವೂ ತೀರ್ಥಂಕರರ ಚರಿತ್ರಗಳೇ ಆಗಿರುವುವೆಂಬುದನ್ನು ವಿಶೇಷವಾಗಿ ಗಮನಿಸಬೇಕು.

ಜೈನಪುರಾಣಗಳಿಗೆ ಎಂಟು ಅಂಗಗಳಿರುವುವೆಂಬುದನ್ನು ಮಹಾಕವಿ ಪಂಪನೂ, ಚಾವುಂಡರಾಯನೂ ಸ್ಪಷ್ಟಪಡಿಸಿದ್ದಾರೆ. ಪಂಪನ ಹೇಳಿಕೆಯಂತೆ ಅವು ಯಾವುವೆಂದರೆ:

೧) ಲೋಕಾಕಾರ ಕಥನ

೨) ದೇಶನಿವೇಶೋಪದೇಶ

೩) ನಗರ ಸಂಪತ್ಪರಿವರ್ತನ

೪) ರಾಜ್ಯರಮಣೀಯಕಾಖ್ಯಾನ
೫) ತೀರ್ಥಮಹಿಮ ಸಮರ್ಥನ
೬) ಚತುರ್ಗತಿ ಸ್ವರೂಪ ನಿರೂಪಣ
೭) ತಪೋದಾನವಿಧಾನ ವರ್ಣನ
೮) ತತ್ಫಲಪ್ರಾಪ್ತಿ ಪ್ರಕಟನ

ಜನ್ನನು ಮಾತ್ರ ಇವುಗಳಲ್ಲಿ ಕ್ರಮವಾಗಿ ೧. ೫, ೬, ೭ ಹಾಗು ೮ ಇವೈದೇ ಮುನಿಪ್ರೋಕ್ತವಾದ ಜಿನಪುರಾಣಗಳ ಅಂಗಗಳೆಂದೂ, ಎಂಟಂಗಗಳಿರುವುದು "ಕವಿಪ್ರೋಕ್ತಕಾವ್ಯ ನಿಬಂಧನೋಚಿತಂ" ಎಂದೂ ತನ್ನ "ಅನಂತನಾಥ ಪುರಾಣ" ದಲ್ಲಿ ಹೇಳಿರುವನು. ಬಹುಶಃ ಉಳಿದ ಮೂರು ಅಂಗಗಳು ಕಾವ್ಯದ ಹದಿನೆಂಟು ಅಂಗಗಳಲ್ಲಿ ಸಮಾವೇಶವಾಗುತ್ತಿದ್ದುದ ರಿಂದ ಪಂಪನು ಹೇಳಿದ ಎಂಟಂಗಗಳು ಕನ್ನಡ ಸಾಹಿತ್ಯದೊಳ ಗಿನ ತೀರ್ಥಂಕರರ ಪುರಾಣಕಾವ್ಯಗಳ ಲಕ್ಷಣವಾಗಿರುವುವೆಂದು ನಾವು ಭಾವಿಸಬಹುದು.

ಆದರೆ ಅಭಿನವಪಂಪನು ತನ್ನ ''ರಾಮಚಂದ್ರ ಚರಿತ ಪುರಾಣ"ದಲ್ಲಿ ಬೇರೆ ವಿಧವಾದ ಎಂಟು ಅಂಗಗಳನ್ನು ಇಟ್ಟು ಕೊಂಡಿರುವುದನ್ನು ಕಂಡುಕೊಳ್ಳಬಹುದು:

ಜಗಮುಂ, ಯುಗಮುಂ. ಮನ್ವಾ
ದಿಗಳಂ, ಕಾಲಸ್ವರೂಪಮುಂ, ಜಿನರಂ, ಚ ॥
ಕ್ರಿಗಳಂ, ಹಲಧರ ಕೃಷ್ಣಾ
ದಿಗಳಂ, ಶ್ರೀರಾಮ ಚರಿತದೊಳ್ ವರ್ಣಿಸುವೆಂ॥

ಇವುಗಳಲ್ಲಿ ವ್ಯತ್ಯಾಸವಿರುವುದೆಂದು ಕಂಡುಬರುವುದಾದರೂ, ಅಭಿನವಪಂಪನ ಪುರಾಣವು ತೀರ್ಥಂಕರರ ಚರಿತ್ರೆಯಲ್ಲವಾದುದರಿಂದ ಅದರ ರಚನೆಯಲ್ಲಿ ಅವನು ಸಂಪೂರ್ಣವಾದ ಸ್ವಾತಂತ್ರ್ಯವನ್ನು ವಹಿಸಿರುವನೆಂಬುದು ಸ್ಪಷ್ಟವಾಗುವುದು.

ಇನ್ನು ತೀರ್ಥಂಕರರ ಚರಿತ್ರೆಗಳ ಅಂತರಂಗದ ವಿಷಯವಾಗಿ ಹೇಳಬೇಕಾದರೆ,ಅವು ಸಾಮಾನ್ಯವಾಗಿ ಐದು ಅಂಗಗಳಿಂದ ಕೂಡಿರುವುವೆಂದು ಹೇಳಬಹುದು. ಅವುಗಳೆಂದರೆ: (೧) ಪೂರ್ವಭವಾವಳಿ, (೨) ತೀರ್ಥಂಕರರ ಪಂಚಕಲ್ಯಾಣ, (೩)ಸಮಯನಿರೂಪಣ, (೪) ಸಮವಸರಣ ಮತ್ತು (೫) ಅನಂತಚತುಷ್ಟಯ ವರ್ಣನ. ತೀರ್ಥಂಕರರ ಚರಿತ್ರೆಗೆ ಅಂತರ್ಗತವಾಗಿ ಜೈನಪುರಾಣಗಳಲ್ಲಿ ಇತರ ಶಲಾಕಾಪುರುಷರಾದ ಚಕ್ರವರ್ತಿಗಳ ಚರಿತ್ರೆಗಳೂ ಬಲದೇವಾದಿಗಳ ಚರಿತ್ರೆಗಳೂ ಬರುವುದುಂಟು. ಈ ಅಂತರಂಗಗಳ ವಿಷಯವಾಗಿ ಮುಂದಿನ ವಿಭಾಗದಲ್ಲಿ ನಿರೂಪಿಸಲಾಗಿದೆ.

## ಅ. ತೀರ್ಥಂಕರರ ಚರಿತ್ರೆ

### (೧) ಪೂರ್ವಭವಾವಳಿ

ಜೈನಾಗಮವು ಪುನರ್ಭವವನ್ನು ಮನ್ನಿಸುವುದು. ಕಾಲಲಬ್ಧಿ[1]ಯನ್ನು ಪಡೆದ ಭವ್ಯಜೀವವು ವಿಕಾಸಕ್ರಮದಿಂದ

---

೧. ಜೈನತತ್ತ್ವಗಳಂತೆ ಜೀವವು ಅಭವ್ಯ ಮತ್ತು ಭವ್ಯ ಎಂದು ಎರಡು ವಿಧ. ಕಾಲಲಬ್ಧಿಯೆಂದರೆ ಅಭವ್ಯಜೀವವು ಭವ್ಯಜೀವವಾಗಲು ದೊರೆತ ಅವಕಾಶ.

ಹಲವಾರು ಜನ್ಮಗಳನ್ನು ತಾಳಿದ ಮೇಲೆ ಕೊನೆಯ ಜನ್ಮದಲ್ಲಿ ಜಿನಪದವನ್ನು ಪಡೆಯುವುದು. ಜೈನಪುರಾಣಗಳಲ್ಲಿ ಜಿನನ (ತೀರ್ಥಂಕರನ) ಹಿಂದಿನ ಎಲ್ಲ ಭವಗಳ ವೃತ್ತಾಂತವೂ ಬರುವುದು. ಇಷ್ಟೇ ಅಲ್ಲ, ಭವ್ಯಜೀವದ ಬೇರೆ ಬೇರೆ ಜನ್ಮಗಳಲ್ಲಿಯ ಅವರ ಜೀವನಚರಿತ್ರೆಯು, ಬುದ್ಧನ ಜಾತಕಗಳಂತೆ ಮೊದಲಿನ ಆಶ್ವಾಸಗಳಲ್ಲಿ ವಿಶದವಾಗಿ ಬರುವುದು. ಜಿನನ ಈ ಪೂರ್ವಜನ್ಮದ ಚರಿತ್ರೆಗಳಿಗೆ ಭವಾವಳಿ ಎಂದು ಕರೆಯುವರು. ಉದಾಹರಣೆಗೆ, ಆದಿತೀರ್ಥಂಕರ(ವೃಷಭ)ನು ಕಾಲಲಬ್ಧಿ ಹೊಂದಿದ ಮಹಾಬಳ ಜನ್ಮದಿಂದ ಒಂಬತ್ತು ಜನ್ಮಗಳನ್ನು ದಾಟಿದ ಮೇಲೆ ಹತ್ತನೆಯ ಜನ್ಮದಲ್ಲಿ ವೃಷಭ ತೀರ್ಥಂಕರನಾಗಿ ಹುಟ್ಟುವನು. ಎಲ್ಲ ತೀರ್ಥಂಕರರಲ್ಲಿ ಹೆಚ್ಚಿಗೆ ಭವಾವಳಿಯುಳ್ಳವನು ೨೪ನೆಯ ತೀರ್ಥಂಕರನಾದ ಮಹಾವೀರನು. ಅವನು ೩೨ ಭವಗಳನ್ನು ದಾಟಿದ ಮೇಲೆ ತೀರ್ಥಂಕರ ಜನ್ಮವನ್ನು ಪಡೆಯುವನು. ಆದಿ ತೀರ್ಥಂಕರರ ಜೀಪವರ್ಮನದಲ್ಲಿ ಅವನು ಮರೀಚಿಯೆಂಬ ಅವರ ಮೊಮ್ಮಗನಾಗಿದ್ದು, ಜಿನಸಮಯವನ್ನು ಅನುಸರಿಸದೆ ಪರವಾದಿಯಾಗಿದ್ದುದರಿಂದ ಹಲವು ಭವಗಳನ್ನು ಹೊಂದಿ ಆಮೇಲೆ ಅವನು ಜಿನಪದವನ್ನು ಪಡೆಯಬೇಕಾಯಿತು. ಉಳಿದ ತೀರ್ಥಂಕರರೊಳಗೆ, ಶಾಂತಿಜಿನನ ಭವಾವಳಿಗಳು ೧೧; ನೇಮಿ–ಪಾರ್ಶ್ವರ ಭವಾವಳಿಗಳು ೯; ಚಂದ್ರಪ್ರಭನವು ೬; ಹಾಗೂ ಉಳಿದ ೧೮ ಜಿನರಿಗೆ ಎರಡೆರಡು ಭವಾವಳಿಗಳು ಇರುವವು. ಭವಾವಳಿಯ ನಿರೂಪಣೆಯು' ಜೈನಪುರಾಣಗಳಿಗೆ ಪ್ರಸ್ತಾವನೆಯಂತೆ ಇರುವುದು.

## (೨) ತೀರ್ಥಂಕರಭವದ ಪಂಚಕಲ್ಯಾಣಗಳು

ಭವಾವಳಿಯ ವಿರಮಣವಾಗಿ ಜಿನಜೀವವು ತೀರ್ಥಂಕರರ ಜನ್ಮವನ್ನು ಪಡೆದ ಮೇಲೆ ಜೈನಪುರಾಣದಲ್ಲಿ ತೀರ್ಥಂಕರರ ಜೀವನ ವೃತ್ತವು ಮುಂದೆ ಸಾಗುವುದು. ಈ ಜೀವನದಲ್ಲಿ ಮುಖ್ಯವಾದ ಐದು ಘಟ್ಟಗಳು ಬರುವುವು. ಅವು ಯಾವು-ವೆಂದರೆ : ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನಪ್ರಾಪ್ತಿ, ಹಾಗು ಪರಿನಿರ್ವಾಣ ಇವು ಮಹೋನ್ನತವಾದ ಪುಣ್ಯಜೀವವು ಪಡೆಯಲಿರುವ ಅಪ್ರತಿಮವಾದ ಜೀವನಾಂಗಗಳಾಗಿರುವುದರಿಂದ. ದೇವೇಂದ್ರನು ತನ್ನ ಅತೀಂದ್ರಿಯ ಜ್ಞಾನದಿಂದ ಇವುಗಳನ್ನು ಮೊದಲೇ ತಿಳಿದು-ಕೊಂಡು, ಅವುಗಳಿಗೆ ಯೋಗ್ಯವಾದ ಹಾಗೂ ಕಲ್ಯಾಣಕಾರಕ-ವಾದ ಅನುಕೂಲತೆಗಳನ್ನು ಒದಗಿಸಿಕೊಡುವನು. ಉದಾಹರಣೆಗೆ, ತೀರ್ಥಂಕರರ ಜೀವವು ಅವತರಿಸಲಿರುವ ತಾಯಿಯ ಗರ್ಭವನ್ನು ಎಲ್ಲ ತೀರ್ಥೋದಕಗಳಿಂದಲೂ ಸುಗಂಧ ದ್ರವ್ಯಗಳಿಂದಲೂ ಶುದ್ಧಗೊಳಿಸಿ ಪವಿತ್ರವನ್ನಾಗಿ ಮಾಡುವುದು (ಗರ್ಭಾವತರಣ); ಜಿನಜೀವದ ಜನನವಾದೊಡನೆ ಅಭಿಷೇಕ ಮಾಡುವುದು (ಜನ್ಮಾಭಿಷೇಕ); ಆ ಜೀವವು ಬೆಳೆದು ದೊಡ್ಡವನಾಗಿ ಸಂಸಾರದಲ್ಲಿ ಅಥವಾ ರಾಜಕಾರಣದಲ್ಲಿ ಮೈ ಮರೆತಾಗ, ಅವನಲ್ಲಿ ವೈರಾಗ್ಯವುಂಟಾಗುವಂಥ ಪ್ರಸಂಗವನ್ನು ಕಲ್ಪಿಸಿ, ಅವನು ತಪಸ್ಸಿಗೆ ಹೋಗುವಂತೆ ಮಾಡುವುದು (ಪರಿನಿಷ್ಕ್ರಮಣ): ಅವನಿಗೆ ಕೇವಲಜ್ಞಾನವು ಪ್ರಾಪ್ತವಾ-ದಾಗ, ಅವನು ಲೋಕಪೂಜ್ಯನಾಗುವಂತೆ ಆರಾಧಿಸುವುದು,

(ಕೇವಲಜ್ಞಾನಪ್ರಾಪ್ತಿ); ಹಾಗೂ ಕೊನೆಯಲ್ಲಿ ಮಹಾನಿರ್ವಾಣದ ಕಾಲದಲ್ಲಿ ಉಚಿತವಾದ ಉತ್ಸವವನ್ನು ಏರ್ಪಡಿಸುವುದು (ಪರಿನಿರ್ವಾಣ). ಇವುಗಳಿಗೆ ಪಂಚಕಲ್ಯಾಣವೆನ್ನುವರು. ಇವು ಸಂಭವಿಸಿದ ಕಾಲದಲ್ಲಿ: ಸುರವೃಷ್ಟಿ, ಸುರದುಂದುಭಿ, ಸುರಾಂಗನಾರಾಗ, ಸುರವಿರಚಿತ ಮಂದಾನಿಲ, ಹಾಗು ಸುರವಂದಿಸ್ತೋತ್ರಗಳೆಂಬ ಪಂಚಾಶ್ಚರ್ಯಗಳು ಉಂಟಾಗುವುವು. ಈ ಪಂಚಕಲ್ಯಾಣಗಳ ಕಾವ್ಯಮಯ ವರ್ಣನೆಯು ಜೈನಪುರಾಣಗಳಲ್ಲಿ ವಿಶದವಾಗಿ ಬರುವುದು.

## (೩). ಸಮಯ ನಿರೂಪಣೆ

ಜಿನಸಮಯವು ಶ್ರುತಸ್ಕಂಧಾನುಸಾರವಾಗಿ ಧರ್ಮಾನುಯೋಗ, ಕರಣಾನುಯೋಗ, ಚರಣಾನುಯೋಗ ಹಾಗೂ ದ್ರವ್ಯಾನುಯೋಗ ಎಂದು ನಾಲ್ಕು ವಿಭಾಗಗಳಿಂದ ಕೂಡಿರುವುದು. ಅವುಗಳಲ್ಲಿ ಜೈನಶಾಸ್ತ್ರದ ದೃಷ್ಟಿಯಿಂದ ಇತಿಹಾಸ, ಭೂಗೋಲ, ಮನಃಶಾಸ್ತ್ರ ಹಾಗೂ ಆಧ್ಯಾತ್ಮಶಾಸ್ತ್ರಗಳು ಅಡಕವಾಗಿರುವುವು. ತೀರ್ಥಕರರ ಚರಿತ್ರವೇ ಇತಿಹಾಸವಾಗಿರುವುದು. ಲೋಕಾಕಾರ ಕಥನಾದಿಗಳಲ್ಲಿ ಭೂವರ್ಣನೆಯ ಜ್ಞಾನವು ಬರುವುದು. ಶ್ರಾವಕಾಚಾರದ ಹಾಗೂ ಯತಿಚರ್ಯೆಯ ಶೀಲ, ಕರ್ಮ. [illegible] ಧ್ಯಾನ ಮುಂತಾದವುಗಳು ಜೈನಧರ್ಮದ ಮನಃಶಾಸ್ತ್ರದ ವಿಷಯಗಳಾಗಿರುವವು. ಕೊನೆಯದಾಗಿ ಜೈನ ಆಧ್ಯಾತ್ಮಶಾಸ್ತ್ರವು (ದ್ರವ್ಯಾನುಯೋಗವು)

ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ, ಪಾಪ, ಪುಣ್ಯಗಳೆಂಬ "ನವಪದಾರ್ಥ"ಗಳೆಂದು ವಿವರಿಸಲಾಗುತ್ತದೆ. ಇವುಗಳಲ್ಲಿ ಅಜೀವವು ಧರ್ಮ, ಅಧರ್ಮ, ಆಕಾಶ, ಪುದ್ಗಲ ಮತ್ತು ಕಾಲ ಎಂದು ಐದು ವಿಧವಾಗಿರುವುದು. ಕಾಲವಿರಹಿತವಾದ ಜೀವಾಜೀವಗಳಿಗೆ ಪಂಚಾಸ್ತಿಕಾಯಗಳೆಂದೂ, ಕಾಲಸಹಿತವಾದ ಜೀವಾಜೀವಗಳಿಗೆ ಷಡ್ದ್ರವ್ಯಗಳೆಂದೂ, ಪಾಪಪುಣ್ಯರಹಿತವಾದ ಪದಾರ್ಥಗಳಿಗೆ ಸಪ್ತತತ್ವಗಳೆಂದೂ ಕರೆಯುವರು. ಇವೆಲ್ಲವುಗಳ ವಿವರಣೆ ಪುರಾಣಗಳಲ್ಲಿ ಯಥಾವಕಾಶವಾಗಿ ಬರುವುದು.

## (೪) ಸಮವಸರಣ

ತೀರ್ಥಂಕರರು ಘೋರತಪಸ್ಸನ್ನಾಚರಿಸಿ ಕೇವಲಜ್ಞಾನವನ್ನು ಸಂಪಾದಿಸಿದ ಮೇಲೆ ಅವರಿಗೆ ದಿವ್ಯಧ್ವನಿಯು ಪ್ರಾಪ್ತವಾಗುವುದು. ಅದನ್ನು ಕೇಳುವವರಿಗೆಲ್ಲ ಪರಮಶ್ರೇಷ್ಠವಾದ ಧರ್ಮಬೋಧೆಯು ಉಂಟಾಗುವುದು. ಆಗ ದೇವೇಂದ್ರನು ಸಕಲ ಜಗತ್ತಿನ ಚರಾಚರ ಜೀವಿಗಳಿಗೆ ಅದನ್ನು ಕೇಳಲು ಅನುಕೂಲವಾಗುವಂತೆ ಸಭಾಭವನವನ್ನು ನಿರ್ಮಿಸುವನು. ಅದಕ್ಕೆ ಸಮವಸರಣಭೂಮಿ ಎಂದು ಕರೆಯುವರು. ಈ ಸಮವಸರಣಭೂಮಿಯೆಂಬುದೊಂದು ಅಲೌಕಿಕವಾದ ಧರ್ಮೋಪದೇಶ ಮಂಟಪವು. ಅದು ಪ್ರಾಸಾದಚೈತ್ಯ ಭೂಮಿಯಾದಿಯಾಗಿ ಏಕಾದಶ ಭೂಮಿಗಳಿಂದ ವಿರಾಜಿಸುವುದು. ಅಲ್ಲಿ ಎಲ್ಲ ಬಗೆಯ ಪ್ರಾಣಿಮಾತ್ರಗಳೂ, ದೇವತೆಗಳೂ ಶ್ರವಣಾನಂದವನ್ನು ಪಡೆಯಲು ಒಂದುಗೂಡು

ವುವು. ತೀರ್ಥಂಕರರು ತಮಗೆ ಪ್ರಾಪ್ತವಾದ ದಿವ್ಯ ಧ್ವನಿಯಿಂದ ಕೈವಲ್ಯ ಬೋಧವನ್ನು ಮಾಡುವರು. ಅದರ ವಿವರಣವೂ ಜೈನಪುರಾಣಗಳ ವಿಷಯವಾಗಿರುವುದು.

## (೫) ಅನಂತಚತುಷ್ಟಯ ವರ್ಣನ

ಕೇವಲ ಜ್ಞಾನವನ್ನು ಪಡೆದ ತೀರ್ಥಂಕರರ ಜೀವವು ಕರ್ಮಬಂಧನದಿಂದ ಬಿಡುಗಡೆ ಹೊಂದುವುದು; ಅಂದರೆ ಅದು ಸಪ್ತತತ್ವಗಳಲ್ಲಿ ಕೊನೆಯದಾದ ಮೋಕ್ಷಪದವನ್ನು ಪಡೆಯುವದು. ಆ ಮೋಕ್ಷವನ್ನು ಪಡೆಯಲು ರತ್ನತ್ರಯಗಳು: ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರಗಳು ಸಾಧನವಾಗಿರುವುವು. ಮೋಕ್ಷವನ್ನು ಪಡೆದ ಜೀವಕ್ಕೆ ಅನಂತಚತುಷ್ಟಯವು ಅಂದರೆ ಅನಂತಜ್ಞಾನ, ಅನಂತ ದರ್ಶನ, ಅನಂತಸುಖ ಮತ್ತು ಅನಂತವೀರ್ಯ—ಇವು ಪ್ರಾಪ್ತವಾಗುವುವು. ಈ ಅನಂತ ಚತುಷ್ಟಯದ ವರ್ಣನೆಯು ಜೈನಪುರಾಣಗಳ ಚರಮದರ್ಶನವಾಗಿರುವುದು.

## ೩. ಚಕ್ರವರ್ತಿ—ಕಾಮದೇವರ ಚರಿತ್ರೆಗಳು

ಜೈನಪುರಾಣಗಳು ತೀರ್ಥಂಕರರ ಇತಿಹಾಸಗಳಾಗಿರು—ವುವು ಎಂಬುದನ್ನು ಹಿಂದೆ ಹೇಳಿದೆ. ತೀರ್ಥಂಕರರ ಜೀವನದ ಅಂತರ್ಗತವಾಗಿ ಆವರವರ ಕಾಲದಲ್ಲಿ ಆಗಿಹೋದ ಚಕ್ರವರ್ತಿಗಳ, ಕಾಮದೇವರ[೧] ಹಾಗೂ ಇತರ ಶಲಾಕಾಪುರುಷರ

---

೧. ಕಾಮದೇವರೂ ಕೆಳಗಿನಂತೆ ೨೪ ಜನರಿರುವರು:

೧ ಬಾಹುಬಲಿ ೨ ಪ್ರಜಾಪತಿ ೩ ಶ್ರೀಧರ

ಚರಿತ್ರೆಗಳೂ ಆಯಾಯ ತೀರ್ಥಂಕರರ ಪುರಾಣಗಳಲ್ಲಿ ಬರುವುವು. ಉದಾಹರಣೆಗೆ, ಆದಿತೀರ್ಥಂಕರರ ಪುರಾಣದಲ್ಲಿ ಆದಿಚಕ್ರವರ್ತಿಯೂ, ಆದಿಕಾಮದೇವನೂ, ಭರತ-ಬಾಹುಬಲಿಗಳೆಂದು ಆದಿತೀರ್ಥಂಕರರ ಮಕ್ಕಳಾಗಿ ಅವತರಿಸುವರು. ಅವರ ಕಥೆಯೂ, ಆ ಪುರಾಣದಲ್ಲಿ ಬರುವುದು. ಎರಡನೆಯ ತೀರ್ಥಂಕರನಾದ ಅಜಿತನಾಥನ ಪುರಾಣದಲ್ಲಿ ಎರಡನೆಯ ಚಕ್ರವರ್ತಿಯಾದ ಸಗರನ ಚರಿತ್ರೆಯೂ ಬರುವುದು. ಮಲ್ಲಿನಾಥ ಪುರಾಣದಲ್ಲಿ, ಪದ್ಮನಾಭಚಕ್ರವರ್ತಿಯ ಕಥೆ ಇರುವುದು. ನಮಿ ಮತ್ತು ನೇಮಿ ತೀರ್ಥಂಕರರ ಪುರಾಣಗಳಲ್ಲಿ ಜಯಸೇನ ಮತ್ತು ಬ್ರಹ್ಮದತ್ತ ಚಕ್ರವರ್ತಿಗಳ ಕಥೆಯೂ ಬರುವದಲ್ಲದೆ, ಪ್ರದ್ಯುಮ್ನ ಮತ್ತು ನಾಗಕುಮಾರರೆಂಬ ಕಾಮದೇವರ ಕಥೆಯೂ ಬರುವುದು. ಶಾಂತಿ, ಕುಂಥು ಮತ್ತು ಅರರೆಂಬ ತೀರ್ಥಂಕರರು ಕೊನೆಯ ಭವದಲ್ಲಿ ಮೊದಲು ಕಾಮದೇವರಾಗಿಯೂ, ಆಮೇಲೆ ಚಕ್ರವರ್ತಿಗಳಾಗಿಯೂ, ತರುವಾಯ ತೀರ್ಥಂಕರರಾಗಿಯೂ ಪರಿಣಮಿಸಿರುವರೆಂದು ಅವರ ಪುರಾಣಗಳಲ್ಲಿ ಕಂಡುಬರುವುದು. ಇತಿಹಾಸ ಕ್ರಮದಲ್ಲಿ ಈ ಎಲ್ಲರ ಚರಿತ್ರೆಗಳನ್ನು ಆಯಾಯ ಪುರಾಣಗಳು ಒಳಗೊಂಡಿರುವುವು.

---

| | | |
|---|---|---|
| ೪ ದರ್ಶನಭದ್ರ | ೫ ಪ್ರಸೇನಚಂದ್ರ | ೬ ಚಂದ್ರವರ್ಣ |
| ೭ ಅಗ್ನಿಯುಕ್ತ | ೮ ಸನತ್ಕುಮಾರ | ೯ ವತ್ಸರಾಜ |
| ೧೦ ಕನಕಪ್ರಭ | ೧೧ ಮೇಘಪ್ರಭ | ೧೨ ಶಾಂತಿನಾಥ |
| ೧೩ ಕುಂಥುನಾಥ | ೧೪ ಅರಹನಾಥ | ೧೫ ವಿಜಯರಾಜ |
| ೧೬ ಶ್ರೀಚಂದ್ರ | ೧೭ ನಳರಾಜ | ೧೮ ಹನುಮಂತ |
| ೧೯ ಬಲಿರಾಜ | ೨೦ ವಾಸುದೇವ | ೨೧ ಪ್ರದ್ಯುಮ್ನ |
| ೨೨ ನಾಗಕುಮಾರ | ೨೩ ಜೀವಂಧರ | ೨೪ ಜಂಬೂಸ್ವಾಮಿ |

ಅಧ್ಯಾಯ ೩

# ಜೈನ ಪುರಾಣಗಳ ಕಥೆಗಳ ಸಂಪ್ರದಾಯ

ಜೈನಪುರಾಣಗಳ ವಸ್ತುವಿಸ್ತಾರದ ರೀತಿಯನ್ನೂ ಅವುಗಳ ಲಕ್ಷಣಗಳನ್ನೂ ಹಿಂದಿನ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಅವುಗಳೊಳಗಿನ ಕಥೆಗಳ ಸಂಪ್ರದಾಯವನ್ನು ಉದಾಹರಿಸುವದಕ್ಕಾಗಿ ಮುಖ್ಯವಾದ ಕೆಲವು ಕಥೆಗಳ ವೈಶಿಷ್ಟ್ಯವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ಅ. ಆದಿಪುರಾಣದೊಳಗಿನ ಕಥೆಗಳು

### (೧) ಆದಿತೀರ್ಥಂಕರರ ಪೂರ್ವಭವಾವಳಿ

ಜಂಬೂದ್ವೀಪದ ಪರವಿದೇಹದ ಗಂಧಿಳ ವಿಷಯದಲ್ಲಿ ಸಿಂಹಪುರವೆಂಬ ಪಟ್ಟಣದಲ್ಲಿ ಶ್ರೀಶೇಣನೆಂಬ ಅರಸನು ಆಳುತ್ತಿದ್ದನು. ಅವನಿಗೆ ಜಯವರ್ಮ ಶ್ರೀವರ್ಮ ಎಂಬ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಕಿರಿಯನು ಪ್ರಜೆಗಳಿಗೆ ಅತ್ಯಂತ ಪ್ರಿಯನಾಗಿದ್ದನು. ಆದುದರಿಂದ ರಾಜನು ತನ್ನ ವೃದ್ಧಾಪ್ಯ-ದಲ್ಲಿ ರಾಜ್ಯವನ್ನು ಕಿರಿಯನಿಗೆ ಕೊಟ್ಟು ತಪಸ್ಸಿಗೆ ಹೊರಟು

ಹೋದನು. ಅದಕ್ಕೆ ಕಿರಿಯ ಮಗನು ನೊಂದುಕೊಂಡು ಜೈನದೀಕ್ಷೆಯನ್ನು ವಹಿಸಿ, ತನ್ನ ತಲೆಕೂದಲುಗಳನ್ನು ಇಡಲೆಂದು ಒಂದು ಹುತ್ತದಲ್ಲಿ ಕೈಯಿಟ್ಟಾಗ ಅಲ್ಲಿದ್ದ ಹಾವು ಅವನಿಗೆ ಕಚ್ಚಿತು. ಆ ಕಾಲದಲ್ಲಿ ಸರಿಯಾಗಿ ಅಂತರಿಕ್ಷದಲ್ಲಿ ಒಬ್ಬ ವಿಯಚ್ಚರೇಂದ್ರನು ಹೋಗುತ್ತಿದ್ದುದನ್ನು ಕಂಡು, ತಾನೂ ವಿದ್ಯಾಧರನಾಗಬೇಕೆಂದು ಬಯಸಿದ್ದರಿಂದ ಅವನು ವಿಜಯಾರ್ಧಗಿರಿಯ[೧] ಉತ್ತರಶ್ರೇಢಿಯ ಅಳಕಾಪುರದಲ್ಲಿ ಮಹಾಬಳನೆಂದು ಜನಿಸಿ ವಿದ್ಯಾಧರರಿಗೆ ಅಧಿಪತಿಯಾದನು.

ಅಳಕಾಪುರದಲ್ಲಿ ಮಹಾಬಳನು ಸ್ವಯಂಬುದ್ಧಾದಿ ಮಂತ್ರಿಗಳ ಸಹಾಯದಿಂದ ರಾಜ್ಯಭಾರವನ್ನು ಸಾಗಿಸುತ್ತಿದ್ದನು. ಒಂದು ದಿನ ಅವನು ಒಡ್ಡೋಲಗದಲ್ಲಿರುವಾಗ ಸ್ವಯಂಬುದ್ಧನು ಧರ್ಮೋಪದೇಶವನ್ನೂ ಯತಿಧರ್ಮಪ್ರಭಾವವನ್ನೂ ತತ್ಫಲಗಳನ್ನೂ ತಿಳಿಸಿದನು. ಮಹಾಮತಿ, ಸಂಭಿನ್ನಮತಿ ಮತ್ತು ಶತಮತಿ ಎಂಬ ಇತರ ಮಂತ್ರಿಗಳು ಭಿನ್ನಮತಗಳನ್ನು ಅವಲಂಬಿಸಿ, ಜೀವನಿಲ್ಲ ಪುಣ್ಯಪಾಪಗಳಿಲ್ಲವೆಂದು ವಾದಿಸಿದರು. ಸ್ವಯಂಬುದ್ಧನು ಅವರೆಲ್ಲರನ್ನು ಯುಕ್ತಿ-ಯುಕ್ತವಾದ ವಾದದಿಂದಲೂ, ದೃಷ್ಟ-ಶ್ರುತ-ಅನುಭೂತ ಕಥೆಗಳ ನಿರೂಪಣದಿಂದಲೂ ಜಯಿಸಿ ಅರಸನ ವಿಶ್ವಾಸಕ್ಕೆ ಪಾತ್ರನಾದನು. ಆದರೆ ಮುಪ್ಪು ಬಂದೊದಗಿದರೂ ಅರಸನಿಗೆ ಇನ್ನೂ ವ್ಯಾಮೋಹವು ಬಿಟ್ಟಿರಲಿಲ್ಲವಾದುದರಿಂದ,

---

೧. ಭರತ ವರ್ಷದ ಮಧ್ಯದಲ್ಲಿರುವ ಶಿಖರ

ಒಮ್ಮೆ ಗಗನಗಾಮಿಯಾದ ಚಾರಣ ಮುನಿಗಳ ಬಳಿಗೆ ಬಂದು, ಅರಸನು ಭವ್ಯನೋ, ಅಭವ್ಯನೋ ಎಂದು ಬೆಸಗೊಂಡನು. ಅವನು ಆಸನ್ನಭವ್ಯನೆಂದು ಅವರಿಂದ ತಿಳಿದುಕೊಂಡು, ಅರಸನ ಬಳಿಗೆ ಹೋಗಿ ವಿವೇಕವನ್ನು ಹೇಳಿದನು. ಅದರಿಂದ ಕಾಲಲಬ್ಧಿಯುಂಟಾಗಿ, ಮಹಾಬಳನು ವೈರಾಗ್ಯವನ್ನು ಅವಲಂಬಿಸಿ, ಪ್ರಾಯೋಪಗಮನ(ಅನಶನವ್ರತ)ದಿಂದ ಶರೀರ ಪರಿತ್ಯಾಗ ಮಾಡಿದನು.

ಮುಂದಿನ ಜನ್ಮದಲ್ಲಿ ಈಶಾನಕಲ್ಪದಲ್ಲಿ * ಲಲಿತಾಂಗ-ನಾಗಿ ಹುಟ್ಟಿದನು. ಇಲ್ಲಿ ಸ್ವಯಂಪ್ರಭೆಯೆಂಬ ದೇವಿಯೊಡನೆ ಚಿರಕಾಲ ಸ್ವರ್ಗಸುಖವನ್ನು ಅನುಭವಿಸಿ, ಕೊನೆಯಲ್ಲಿ ಚ್ಯುತನಾಗಿ ಭೂಮಿಗೆ ಅವತರಿಸಿದನು.

ಮುಂದೆ ಉತ್ಪಳಪುರದಲ್ಲಿ ವಜ್ರಜಂಘನೆಂಬ ರಾಜನಾಗಿ ಹುಟ್ಟಿದನು. ಸ್ವಯಂಪ್ರಭೆ ಪುಂಡರೀಕಿಣಿಯಲ್ಲಿ ಶ್ರೀಮತಿ-ಯೆಂಬ ರಾಜಕುಮಾರಿಯಾಗಿ ಹುಟ್ಟಿದಳು. ಇಬ್ಬರಿಗೂ ಯೌವನೋದಯವಾಯಿತು. ಪೂರ್ವಜನ್ಮ ಸಂಸ್ಕಾರದಿಂದ ಅವರು ಪರಿಚಿತರಾಗಿ ವಿವಾಹಬದ್ಧರಾದರು. ಬಹುಕಾಲದ

* "ಲೋಕಾಕಾರಕಥನ"ದ ಪ್ರಕಾರ ಅಧಃ, ಮಧ್ಯ, ಊರ್ಧ್ವ ಎಂದು ಲೋಕದ ವಿಭಾಗಗಳು ಮೂರು. ಊರ್ಧ್ವಲೋಕದಲ್ಲಿ ೧೬ ಕಲ್ಪ (ಸ್ವರ್ಗ) ಗಳು ಹಾಗು ಅವುಗಳ ಮೇಲೆ ೨೩ ವಿಮಾನಗಳು ಇರುವವು. ಅಲ್ಲಿ ವಾಸಿಸುವವರು ದೇವತೆಗಳು. ಕಲ್ಪಗಳಲ್ಲಿ ವಾಸಿಸುವವರಿಗೆ ಕಲ್ಪವಾಸಿಗಳೆಂತಲೂ, ವಿಮಾನಗಳಲ್ಲಿ ವಾಸಿಸುವವರಿಗೆ ಅಹಮಿಂದ್ರರೆಂತಲೂ ಅನ್ನುವರು.

ವರೆಗೆ ಸುಖದಿಂದ ರಾಜ್ಯವಾಳಿದ ಮೇಲೆ ಒಂದು ದಿನ ಆ ದಂಪತಿಗಳು ಮಲಗಿದ ಮನೆಯಲ್ಲಿ ಧೂಪದ ಹೊಗೆ ತುಂಬಿ ಇಬ್ಬರೂ ಕಾಲವಶರಾದರು.

ಐದನೆಯ ಜನ್ಮದಲ್ಲಿ ಅವರು ಭೋಗಭೂಮಿ* ಯಲ್ಲಿ ಅವತರಿಸಿದರು. ಅಲ್ಲಿಗೆ ಒಬ್ಬ ಚಾರಣನು ಬಂದು ಅವರಿಗೆ ಸಮ್ಯಗ್‌ದರ್ಶನವನ್ನು ಬೋಧಿಸಿದನು.

ಆರನೆಯ ಜನ್ಮದಲ್ಲಿ ಅವರೀರ್ವರೂ ದೇವರಾಗಿ ಶ್ರೀ-ಪ್ರಭವಿಮಾನದಲ್ಲಿ ಜನಿಸಿದರು. ವಜ್ರಜಂಘನು ಶ್ರೀಧರನೆಂಬ ದೇವನಾದನು; ಶ್ರೀಮತಿಯು ಸ್ವಯಂಪ್ರಭನೆಂಬ ದೇವ-ನಾದಳು.

ಏಳನೆಯ ಜನ್ಮದಲ್ಲಿ ಅವನು ಸುವಿಧಿಯೆಂಬ ಹೆಸರಿ-ನಿಂದ ಸುಸೀಮಾನಗರಕ್ಕೆ ಅರಸನಾಗಿ ಹುಟ್ಟಿದನು. ಶ್ರೀಮತಿ ಯಾಗಿದ್ದ ಸ್ವಯಂಪ್ರಭದೇವನು ಕೇಶವನೆಂಬ ಹೆಸರಿನಿಂದ ಅವ ನಿಗೆ ಪುತ್ರನಾಗಿ ಜನಿಸಿದನು. ಪಂಚಾಣುವ್ರತಾದಿಗಳನ್ನು

---

* ಕಾಲವಿಭಾಗದಲ್ಲಿ ಉತ್ಸರ್ಪಿಣಿ, ಅವಸರ್ಪಿಣಿ ಎಂದು ಎರಡು ವಿಧ. ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಮತ್ತೆ ಆರು ಭಾಗ ಗಳು. ಉತ್ಸರ್ಪಿಣಿಯ ಕೊನೆಯ ಮೂರು ಭಾಗಗಳೂ ಅವಸರ್ಪಿಣಿಯ ಮೊದಲಿನ ಮೂರು ಭಾಗಗಳೂ ಕೂಡಿ ಭೋಗ ಭೂಮಿ ಎನಿಸುವುದು. ಆಗ ಕಲ್ಪವೃಕ್ಷಗಳು ಜನರು ಬಯಸಿ ದ್ದನ್ನು ನೀಡಿ ಸುಖಸಮೃದ್ಧಿಯನ್ನು ಉಂಟುಮಾಡುವುವು. ತದ್ವಿರುದ್ಧವಾಗಿ ಉಳಿದ ಆರು ಭಾಗಗಳಲ್ಲಿ ಪ್ರವರ್ತಿಸುವುದು ಕರ್ಮಭೂಮಿಯು.

ಕೈಕೊಂಡು ಸಮಾಧಿವಿಧಿಯಿಂದ ಸುವಿಧಿಯು ಶರೀರ ಪರಿತ್ಯಾಗ ಮಾಡಿದನು.

ಎಂಟು-ಒಂಬತ್ತನೆಯ ಜನ್ಮಗಳಲ್ಲಿ ಕ್ರಮವಾಗಿ ಅಚ್ಯುತೇಂದ್ರ ಹಾಗೂ ವಜ್ರನಾಭಿರಾಜನಾಗಿ ಜನ್ಮತಾಳಿದನು. ಹತ್ತನೆಯ ಜನ್ಮದಲ್ಲಿ ಸರ್ವಾರ್ಥಸಿದ್ಧಿವಿಮಾನ[೧] ದಲ್ಲಿ ಅಹಮಿಂದ್ರನಾಗಿ ಇಂದ್ರ ಪದವನ್ನು ಉಪಭೋಗಿಸಿದನು. ಹನ್ನೊಂದನೆಯ ಜನ್ಮದಲ್ಲಿ ಪುರುದೇವನಾಗಿ ಅಯೋಧ್ಯೆಯಲ್ಲಿ ಆಳುತ್ತಿದ್ದ ಹದಿನಾಲ್ಕನೆಯ ಮನುವಾದ ನಾಭಿರಾಜ ಹಾಗೂ ಅವನ ಅಗ್ರಮಹಿಷಿಯಾದ ಮರುದೇವಿಯರ ಶಿಶುವಾಗಿ ಜನಿಸಿದನು. ಇದೇ ಆದಿತೀರ್ಥಂಕರರ ಚರಮಜನ್ಮವಾಗಿರುವುದು.[೨]

---

೧ ಊರ್ಧ್ವಲೋಕದ ವಿಮಾನಗಳಲ್ಲಿ ಎಲ್ಲಕ್ಕೂ ಮೇಲಿನದು. ಇದಕ್ಕೂ ಮೇಲೆ ಇರುವುದು ಸಿದ್ಧಶಿಲೆ. ಅದು ತೀರ್ಥಂಕರ ಅಥವಾ ಅರ್ಹತ್ಪದವನ್ನು ಪಡೆದ ಜೀವಗಳು ಶಾಶ್ವತವಾಗಿ ವಾಸಿಸುವ ಸ್ಥಾನ. ಭವ್ಯಜೀವಿಗಳ ಉನ್ನತಿಯು ಜನ್ಮಾಂತರಗಳಲ್ಲಿ ಪಡೆಯುವ ವಿಮಾನಭವಗಳಿಂದ ಕಂಡುಬರುವುದು.

೨. ಆದಿಪುರಾಣ, ಷೋಡಶಾಶ್ವಾಸ, ಪದ್ಯ ೫೮ ನೋಡಿ :

ಭೋಗಕಾಂಕ್ಷೆಯೊಳ್ ಜಯವರ್ಮಂ, ಬಳಿಕೀ
ಮಹಾಬಳಂ, ಲಲಿತಾಂಗಂ, ವಜ್ರಜಂಘಂ ।
ಭೋಗಭೂಮಿಜಂ, ಶ್ರೀಧರದೇವಂ, ಸುವಿಧಿನರಾಧಿಪಂ,
ಅಚ್ಯುತೇಂದ್ರಂ ॥
ಸಾಗರಾಂತರಂ ನೆಲನನಿತುಮಂ ಚಕ್ರದಿಂ
ಬೆಸಕೈಸಿದ ವಜ್ರನಾಭಿ ।
ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ
ಬಂದಿಲ್ಲಿ ತಾನಾದಂ ಆದಿದೇವಂ ॥ ೧ ॥

## (೨) ಆದಿತೀರ್ಥಂಕರರ ಇಹಜೀವನ ಚರಿತ್ರೆ

ತೀರ್ಥಂಕರರ ಚರಿತ್ರೆಯ ವಸ್ತುವಿಸ್ತಾರವು ಪಂಚ ಕಲ್ಯಾಣಗಳಿಂದ ಕೂಡಿದುದೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಆ ಆಗಮಿಕ ಅಂಗಗಳನ್ನುಳಿದು, ಆದಿ ತೀರ್ಥಂಕರರ ಜೀವನ ಚರಿತ್ರೆಯ ರೂಪರೇಷೆಯನ್ನು ಇಲ್ಲಿ ಕೊಡಲಾಗಿದೆ.

ಮರುದೇವಿಯು ಗರ್ಭವತಿಯಾಗಿದ್ದಾಗ ತೀರ್ಥಂಕರರ ಜನನಸೂಚಕವಾದ ಷೋಡಶ ಸ್ವಪ್ನಗಳನ್ನು ಕಾಣುವಳು. ಮುಂದೆ ಪುರುದೇವನು (ಪುರುದೇವ–ವೃಷಭ–ಆದಿಬ್ರಹ್ಮ ಎಂಬಿವು ಆದಿತೀರ್ಥಂಕರರ ಪರ್ಯಾಯ ನಾಮಗಳು) ಬೆಳೆದು ದೊಡ್ಡವನಾದಂತೆ ಅವನಿಗೆ ರಾಜ್ಯಲಕ್ಷ್ಮಿಯಲ್ಲಿ ಅಭಿಲಾಷೆಯು ಕಂಡುಬರಲಿಲ್ಲ. ತಂದೆಯಾದ ನಾಭಿರಾಜನು ಹಲವು ರೀತಿ ಯಲ್ಲಿ ತಿಳಿಹೇಳಿ ಮಗನಿಂದ ವಿವಾಹಕ್ಕೆ ಒಪ್ಪಿಗೆಯನ್ನು ಪಡೆದನು. ಬಹಳ ಸಂಭ್ರಮದಿಂದ ಯಶಸ್ವತಿ–ಸುನಂದೆಯ ರೆಂಬ ಕನ್ನಿಕೆಯರೊಡನೆ ಅವನ ವಿವಾಹವಾಯಿತು. ಯಶ ಸ್ವತಿಗೆ ಭರತನೆಂಬ ಮಗನೂ, ಬ್ರಾಹ್ಮಿಯೆಂಬ ಮಗಳೂ ಹುಟ್ಟಿದರು. ಸುನಂದೆಗೆ ಬಾಹುಬಲಿಯೆಂಬ ಮಗನೂ, ಸುಂದರಿಯೆಂಬ ಮಗಳೂ ಹುಟ್ಟಿದರು.

ಮಕ್ಕಳು ದೊಡ್ಡವರಾದಮೇಲೆ ಪುರುದೇವನು ಅವರಿಗೆ ಉಚಿತವಾದ ವಿದ್ಯಾಭ್ಯಾಸವನ್ನು ಮಾಡಿಸಿದನು. ಬ್ರಾಹ್ಮಿಗೆ ಲಿಪಿಯನ್ನೂ ಸುಂದರಿಗೆ ಗಣಿತವನ್ನೂ, ಕ್ರಮವಾಗಿ ತನ್ನ

ಬಲಗೈಯಿಂದಲೂ ಎಡಗೈಯಿಂದಲೂ ಕಲಿಸಿ, ಅವರಿಗೆ ಸಾಹಿತ್ಯ, ವ್ಯಾಕರಣ, ಛಂದೋಲಂಕಾರಾದಿ ಸಮಸ್ತ ವಿದ್ಯೆಗಳನ್ನು ಬೋಧಿಸಿದನು. ಗಂಡುಮಕ್ಕಳಿಗೆ ಅರ್ಥ, ಗಾಂಧರ್ವ, ಭರತ ಮುಂತಾದ ಲೋಕೋಪಕಾರಿಗಳಾದ ಶಾಸ್ತ್ರಗಳನ್ನು ಉಪದೇಶಿಸಿದನು.

ಆ ಕಾಲದಲ್ಲಿ ಅವಸರ್ಪಿಣಿಯ ಪ್ರಭಾವದಿಂದ ಕಲ್ಪವೃಕ್ಷಗಳ ಶಕ್ತಿಯು ಕಳೆಗುಂದಲು, ಪ್ರಜೆಗಳು ಅನ್ನವಸನಾದಿಗಳಿಲ್ಲದೆ ದಿಕ್ಕುಗಾಣದಾದರು. ಆಗ ಪುರುದೇವನು ಅಸಿ-ಮಷಿ-ಕೃಷಿಗಳನ್ನು ಕಲ್ಪಿಸಿ ಕ್ಷತ್ರಿಯ-ವೈಶ್ಯ-ಶೂದ್ರರು ಅವುಗಳನ್ನು ಅವಲಂಬಿಸುವಂತೆ ಬೋಧಿಸಿದನು. ಮುಂದೆ ಭರತನು ದ್ವಿಜರನ್ನು ನಿರ್ಮಿಸಿದನು. ಅವರೆಲ್ಲರಿಗೆ ಉಚಿತವಾದ ವೃತ್ತಿಗಳನ್ನೂ, ಅಧಿಕಾರಗಳನ್ನೂ ವಿಧಿಸಿ. ಅವುಗಳ ರಕ್ಷಣೆಯಾಗುವಂತೆ ಕುರು-ಹರಿ-ನಾಥ-ಉಗ್ರ ಎಂಬ ರಾಜವಂಶಗಳನ್ನು ನಿಯಮಿಸಿದನು. ಹೀಗೆ ಅವನು ಬಹುಕಾಲದ ವರೆಗೆ ಅಯೋಧ್ಯೆಯಲ್ಲಿ ರಾಜ್ಯವನ್ನಾಳಿದನು.

ಅವನ ಪರಿನಿಷ್ಕ್ರಮಣ ಕಾಲವು ಸಮೀಪಿಸಲು ಇಂದ್ರನು ಸಂಗೀತ ಪ್ರಸಂಗದಿಂದ ಅವನನ್ನು ಆರಾಧಿಸಲು ಅವನ ಓಲಗಕ್ಕೆ ಬಂದನು. ನೀಲಾಂಜನೆಯೆಂಬ ಸುರಸುಂದರಿಯ ನಾಟ್ಯವನ್ನು ಏರ್ಪಡಿಸಿದನು. ಆಕೆ ನಾಟ್ಯವಾಡುತ್ತ, ಆಡುತ್ತ ಆಯುರವಸಾನವಾಗಲು ಹಾಗೆಯೇ ಅದೃಶ್ಯಳಾದಳು. ರಸಭಂಗವಾಗದಂತೆ ಇಂದ್ರನು ಯಾರಿಗೂ ತಿಳಿಯದಂತೆ ಪಾತ್ರಾಂತರವನ್ನು ಯೋಜಿಸಿದನು. ಆದರೆ ಪುರುದೇವನಿಗೆ ಅದರ ಅರಿವಾಗಿ,

ಅದರಿಂದ ಅವನಿಗೆ ನಿರ್ವೇದವುಂಟಾಯಿತು. ಅಲ್ಲಿಂದ ಹೊರಟು ಪೂರ್ವಾಭಿಮುಖವಾಗಿ ಹೋಗಿ ಕೇಶಗಳನ್ನು ಪರಿದು ದೀಕ್ಷೆಯನ್ನು ಕೈಕೊಂಡನು. ರಜತಾಚಲದಲ್ಲಿ ಆರು ತಿಂಗಳು ತಪಸ್ಸನ್ನು ಆಚರಿಸಿ, ಚರ್ಯಾಮಾರ್ಗದಲ್ಲಿ ನಡೆಯುತ್ತಿದ್ದಾಗ ಹಸ್ತಿನಾಪುರಕ್ಕೆ ಬಂದು ರಾಜಪುತ್ರನಾದ ಶ್ರೇಯಾಂಸನಿಂದ ಕಬ್ಬಿನ ಹಾಲನ್ನು ಸ್ವೀಕರಿಸಿ ಕಾಯಸ್ಥಿತಿಯನ್ನು ನಿರ್ವರ್ತಿಸಿ, ಮತ್ತೆ ಉಗ್ರವಾದ ತಪವನ್ನು ಆಚರಿಸಿ ಕೇವಲ ಜ್ಞಾನವನ್ನು ಪಡೆದನು. ಪುರಿಮತಾಳಪುರದಲ್ಲಿ ಸಮವಸರಣದಲ್ಲಿ ನೆಲೆಸಿ ತನಗೆ ಪ್ರಾಪ್ತವಾದ ದಿವ್ಯವಾಣಿಯಿಂದ ಸಮಸ್ತರಿಗೆ ಧರ್ಮೋಪದೇಶವನ್ನು ಮಾಡಿದನು. ಕೂಡಲೇ ಸಮವಸರಣವು ಅಂತರಿಕ್ಷದಲ್ಲಿ ನಡೆಯತೊಡಗಿತು. ಹೀಗೆ ಹಲವು ದೇಶಗಳನ್ನು ಸಂಚರಿಸುತ್ತ ಲೋಕಕಲ್ಯಾಣಕ್ಕಾಗಿ ಭೂಲೋಕದೊಳಗಿನ ಅತ್ಯುಚ್ಚ ಶಿಖರವಾಗಿದ್ದ ಕೈಲಾಸದಲ್ಲಿ ಬಂದು ನೆಲೆಸಿದನು. ಅಲ್ಲಿಯೇ ಮುಂದೆ ಅವನು ಪರಿನಿರ್ವಾಣವನ್ನು ಹೊಂದಿದನು.

## (೩) ಭರತ ಬಾಹುಬಲಿಗಳ ಚರಿತ್ರೆ

ಭರತನು ಮೊದಲನೆಯ ಚಕ್ರವರ್ತಿಯು. ಚಕ್ರವರ್ತಿಗೆ ಹದಿನಾಲ್ಕು ರತ್ನಗಳು ಪ್ರಾಪ್ತವಾಗುವವು. ಅವುಗಳಲ್ಲಿ ಚಕ್ರ ರತ್ನವು ಮುಖ್ಯವಾದುದು. ಲೋಕಕಲ್ಯಾಣಕ್ಕಾಗಿ ಧರ್ಮವೇ ಗೆಲ್ಲುವಂತಾಗಬೇಕು ಆ ಧರ್ಮವು ಆದಿತೀರ್ಥಂಕರರಿಂದ ಪ್ರಸ್ಥಾಪಿತವಾದ ಮೇಲೆ ಭರತ ಚಕ್ರವರ್ತಿಯು ಅದರ ಪ್ರಸಾರಕ್ಕಾಗಿಯೂ, ದುಷ್ಟರ ನಿಗ್ರಹಕ್ಕಾಗಿಯೂ ದಿಗ್ವಿಜಯ ಕ್ಕಾಗಿ ಹೊರಟನು. ಷಟ್ಖಂಡ ಪೃಥ್ವಿಯೆಲ್ಲವನ್ನು ಅವನು ಗೆದ್ದುಕೊಂಡು ವೃಷಭಾಚಲಕ್ಕೆ ಬಂದನು. ಅಷ್ಟು ಹೊತ್ತಿಗೆ ತಾನು ಅಜೇಯನೆಂಬ ಗರ್ವವು ಅವನಲ್ಲಿ ಸೇರಿಬಿಟ್ಟಿತ್ತು. ಅಲ್ಲಿ ವಿಜಯ ಪ್ರಶಸ್ತಿಯನ್ನು ಕೆತ್ತಿಸುವುದಕ್ಕಾಗಿ ನೋಡಿದರೆ ಒಂದು ಕಲ್ಲೂ ದೊರೆಯದಂತಾಯಿತು. ಹಿಂದಿನ ಕಲ್ಪಶತಕೋಟಿಗಳಲ್ಲಿ ಜಯಶೀಲರಾದ ಚಕ್ರವೃಂದದ ಪ್ರಶಸ್ತಿಗಳು ಒಂದೂ ಬಿಡದೆ ಎಲ್ಲ ಕಲ್ಲುಗಳ ಮೇಲೂ ವ್ಯಾಪಿಸಿದ್ದುವು. ಕೊನೆಗೆ ಅದರೊಳ ಗಿನ ಒಂದನ್ನು ಅಳಿಸಿ, ತನ್ನ ಪ್ರಶಸ್ತಿಯನ್ನು ಕೆತ್ತಿಸಬೇಕಾ ಯಿತು.

ಷಟ್ಖಂಡ ಪೃಥ್ವಿಯನ್ನು ಗೆದ್ದು ತನ್ನ ರಾಜಧಾನಿಯ ಬಾಗಿಲಿಗೆ ಬಂದರೆ, ಚಕ್ರರತ್ನವು ಮುಂದೆ ಪ್ರವೇಶ ಮಾಡದೇ ಅಲ್ಲಿಯೇ ನಿಂತುಬಿಟ್ಟಿತು. ಅವನ ನೂರು ಮಂದಿ ತಮ್ಮಂದಿರೂ

ಅವನ ಗರ್ವದ ಪ್ರತೀಕಾರವನ್ನು ಮಾಡಿ, ತಮ್ಮ ತಂದೆಯಾದ ಪುರು ಪರಮೇಶ್ವರನಲ್ಲಿ ದೀಕ್ಷೆಯನ್ನು ಪಡೆದರು. ಯುವರಾಜ ನಾದ ಬಾಹುಬಲಿಯು ಇದರಿಂದ ಕೆರಳಿದನು. ಯುದ್ಧವು ಅನಿ ವಾರ್ಯವಾಯಿತು. ದಿಗ್ವಿಜಯದಲ್ಲಿ ವಿಜಯಮಾಲೆಯನ್ನು ಸಂಪಾದಿಸಿದ ಚಕ್ರರತ್ನದ ಪ್ರಯೋಗವೂ ಆಯಿತು ಅದು ಹೋಗಿ ಬಾಹುಬಲಿಯ ಪ್ರದಕ್ಷಿಣೆಯನ್ನು ಮಾಡಿ ಬಲಬದಿಗೆ ನಿಂತುಕೊಂಡಿತು ಭರತನ ಗರ್ವವು ಹರಿಯಿತು. ಜ್ಞಾನೋದ ಯವೂ ಆಯಿತು. ತಮ್ಮನ ಮುಂದೆ ಅವನು ತಲೆ ಬಗ್ಗಿಸಿದನು. ತಮ್ಮನಿಗೆ ಪಶ್ಚಾತ್ತಾಪವಾಯಿತು. ಅವನು ಗೆದ್ದುಕೊಂಡು ಬಂದಿದ್ದ ಷಟ್ಖಂಡ ಪೃಥ್ವಿಯನ್ನು ಧರ್ಮದಿಂದ ಆಳುವಂತೆ ಅವನಿಗೇ ಬಿಟ್ಟುಕೊಟ್ಟು, ತಾನೂ ತಂದೆಯ ಬಳಿಗೆ ಹೋಗಿ ದೀಕ್ಷೆಗೊಂಡನು.

ಬಾಹುಬಲಿಯು ಒಂದು ವರ್ಷದವರೆಗೂ ಪ್ರತಿಮಾ ಯೋಗದಲ್ಲಿದ್ದರೂ ಭರತನ ರಾಜ್ಯದಲ್ಲಿ ನಿಂತಿರುವೆನಲ್ಲಾ ಎಂಬ ಮನಃಕಷಾಯದಿಂದ ಅವನಿಗೆ ಜ್ಞಾನೋದಯವಾಗಲಿಲ್ಲ. ಅದನ್ನು ವೃಷಭನಾಥನಿಂದ ತಿಳಿದು ಭರತನು ಬಂದು ಸರ್ವಾರ್ಪಣಭಾವದಿಂದ ಪಾದಕ್ಕೆ ಎರಗಲು, ಆ ಕೂಡಲೇ ಬಾಹುಬಲಿಗೆ ಕೇವಲ ಜ್ಞಾನವು ಪ್ರಾಪ್ತವಾಯಿತು. ಭರತನಿ- ಗಿಂತ ಮೊದಲೇ ಅವನು ಕೈವಲ್ಯವನ್ನು ಪಡೆದುದರಿಂದ ಭರತ ನಿಂದಲೂ ಪೂಜಾರ್ಹನಾದನು. ಭರತನು ಧರ್ಮಸಿಂಹಾಸನ ದಲ್ಲಿ ಕುಳಿತು ಸಾಮ್ರಾಜ್ಯಲಕ್ಷ್ಮಿಗೆ ಅಧಿಪತಿಯಾಗಿದ್ದರೆ ಬಾಹು ಬಲಿಯು ಮೋಕ್ಷಲಕ್ಷ್ಮಿಯನ್ನು ಸಂಪಾದಿಸಿ ಆಧ್ಯಾತ್ಮ ಸಾಮ್ರಾಜ್ಯದ ಅಧಿಪತಿಯಾದನು.

## ಆ. ಆಗಮಿಕ ರಾಮಾಯಣ–ಭಾರತಗಳು

### (೧) ಆಗಮಿಕ (ಜೈನ) ರಾಮಾಯಣ

ನಾಗಚಂದ್ರ ( ಅಭಿನವ ಪಂಪ )ನ "ರಾಮಚಂದ್ರ-ಚರಿತ ಪುರಾಣ"ವು ಆಗಮಿಕ ರಾಮಾಯಣವಾಗಿರುವುದು. ಇದರ ಕಥೆಯು ವೈದಿಕ ರಾಮಾಯಣದಂತೆ ಇರುವುದಾದರೂ ಅದು ಹಲವು ಅಂಶಗಳಲ್ಲಿ ಭಿನ್ನವಾಗಿರುವುದು. ಹೀಗೆ ಬೇರೆಯಾಗಿರುವ ಕಾರಣವನ್ನು ವಿಮಲಸೂರಿಯು ತನ್ನ ಪ್ರಾಕೃತ ರಾಮಾಯಣ ( ಪಉಮಚರಿಅ ) ದಲ್ಲಿ ವಿವರಿಸಿರುವನು. ಮಹಾವೀರನ ಗಣಾಗ್ರಣಿಯಾದ ಗೌತಮನು ಮಗದಾಧಿಪನಾದ ಶ್ರೇಣಿಕನಿಗೆ ಅದನ್ನು ಪೂರ್ವದಲ್ಲಿ ಹೇಳಿದನು ಎಂದಿದೆ. ಶ್ರೇಣಿಕನು ತನ್ನ ಎಷ್ಟೋ ಸಂದೇಹಗಳನ್ನು ಗೌತಮನಿಗೆ ಕೇಳಿದನಂತೆ : ರಾವಣನಿಗೆ ಹತ್ತು ತಲೆಗಳಿದ್ದುವು ನಿಜವೇ ? ಅಷ್ಟು ಬಲಿಷ್ಠನಾದ ರಾವಣನ ಸೈನ್ಯವನ್ನು ಕಪಿಗಳು ನಾಶ ಮಾಡಿದ್ದುದು ಸರಿಯೇ? ಕುಂಭಕರ್ಣನು ಆರು ತಿಂಗಳ ವರೆಗೆ ನಿದ್ದೆ ಮಾಡುತ್ತಿದ್ದುದು ಹೇಗೆ ? ಒಮ್ಮೆ ಎದ್ದ ಕೂಡಲೇ ಕೈಗೆ ಸಿಕ್ಕಿದ್ದನ್ನೆಲ್ಲ ತಿಂದುಹಾಕುತ್ತಿದ್ದುದು ಹೇಗೆ ? ವಿಸ್ತೀರ್ಣವಾದ ಸಮುದ್ರವನ್ನು ಹನುಮಂತನು ಹೇಗೆ ಹಾರಿದನು ? ಇಂಥ ಆಕ್ಷೇಪಗಳನ್ನು ಗುರಿಯಾಗಿಟ್ಟುಕೊಂಡು, ಮಹಾವೀರನಿಂದ

ತಾನು ಕೇಳಿ ತಿಳಿದುಕೊಂಡ ರಾಮನ ಕಥೆಯನ್ನು ಗೌತಮನು ಶ್ರೇಣಿಕನಿಗೆ ನಿವೇದಿಸಿದನು. ಆ ಕಥೆಯು ಹೀಗಿದೆ:

ದಶರಥನು: ವಿನೀತಾಪುರದ ಅರಸನಾದ ಅನರಣ್ಯನ ಮಗನು. ಅವನು ಅಪರಾಜಿತೆ, ಸುಮಿತ್ರೆ, ಸುಪ್ರಭೆ ಎಂಬ ಹೆಂಡಿರನ್ನು ಮದುವೆಯಾಗಿ ಸುಖವಾಗಿ ರಾಜ್ಯವಾಳುತ್ತಾ ಇದ್ದನು. ಆಗ ದಶಮುಖನು ದಿಗ್ವಿಜಯವನ್ನು ಮಾಡಿ ಅಷ್ಟದಿಕ್ಪಾಲಕರನ್ನು ಗೆದ್ದು ಲಂಕೆಯಲ್ಲಿ ರಾಜ್ಯವಾಳುತ್ತಿದ್ದನು. ಒಂದು ದಿನ ವಿಭೀಷಣನಿಗೆ ಜಾನಕಿಯ ಸಲುವಾಗಿ ರಾವಣನು ದಾಶರಥಿಯ ಕೈಯಿಂದ ಸಾಯುವನು ಎಂದು ಒಬ್ಬ ನೈಮಿತ್ತಿಕನು ಹೇಳುವನು. ದಶರಥನಿಗೂ ಜನಕನಿಗೂ ಮಕ್ಕಳಾಗುವ ಪೂರ್ವದಲ್ಲಿಯೇ ಕೊಂದು ಹಾಕಿದರೆ ಈ ವಿಪತ್ತಿನಿಂದ ಪಾರಾಗಬಹುದು ಎಂದು ಯೋಚಿಸಿ ಅವನು ಸೇವಕರನ್ನು ವಿನೀತಾಪುರಕ್ಕೆ ಕಳಿಸಿದನು. ಇದನ್ನು ತಿಳಿದ ನಾರದರು ಮುಂಚಿತವಾಗಿಯೇ ಅವರಿಬ್ಬರಿಗೂ ಈ ವಾರ್ತೆಯನ್ನು ತಿಳಿಸಿ ಅವರ ಪ್ರತಿಮೆಗಳನ್ನು ಮನೆಯಲ್ಲಿ ಇರಿಸಿ ಅವರು ವೇಷಾಂತರದಿಂದ ಅಲ್ಲಿಂದ ಪಾರಾಗಿ ಹೋಗುವಂತೆ ಏರ್ಪಡಿಸುವರು. ವಿಭೀಷಣನ ಸೈನಿಕರು ಬಂದು ಆ ಪ್ರತಿಮೆಗಳನ್ನು ಕತ್ತರಿಸಿ, ವಿಭೀಷಣನಿಗೆ ತಮ್ಮ ವರದಿಯನ್ನು ಒಪ್ಪಿಸುವರು.

ದೇಶ-ದೇಶಗಳನ್ನು ಅಲೆದಾಡುತ್ತಿದ್ದಾಗ ಕೌತುಕಮಂಗಳವೆಂಬ ಪುರದಲ್ಲಿ ಕೈಕಯಿಯ ಸ್ವಯಂವರ ಸಮಾರಂಭಕ್ಕೆ ದಶರಥನು ಹೋದನು ಅಲ್ಲಿ ಕೈಕಯಿಯು

ದಶರಥನಿಗೇ ಮಾಲೆಯನ್ನು ಹಾಕಿದಳು. ನಿರಾಶರಾದ ರಾಜಕುಮಾರರೊಂದಿಗೆ ದಶರಥನು ಯುದ್ಧ ಮಾಡಬೇಕಾಯಿತು. ಅದೇ ಯುದ್ಧದಲ್ಲಿ ದಶರಥನಿಗೆ ಸಹಾಯಮಾಡಿ ಕೈಕಯಿಯು ಅವನಿಂದ ಎರಡು ವರಗಳನ್ನು ಪಡೆದಳು. ಕೆಲವು ಕಾಲದ ಮೇಲೆ ದಶರಥ-ಜನಕರಿಬ್ಬರೂ ತಮ್ಮ ತಮ್ಮ ರಾಜಧಾನಿಗೆ ತೆರಳಿದರು.

ದಶರಥನಿಗೆ ಅಪರಾಜಿತೆಯಿಂದ ರಾಮ, ಕೈಕಯಿ-ಯಿಂದ ಭರತ, ಸುಮಿತ್ರೆಯಿಂದ ಲಕ್ಷ್ಮಣ, ಹಾಗೂ ಸುಪ್ರಭೆ-ಯಿಂದ ಶತ್ರುಘ್ನ ಎಂದು ನಾಲ್ವರು ಮಕ್ಕಳು ಹುಟ್ಟಿದರು. ಜನಕನಿಗೂ ವೈದೇಹಿಯಿಂದ ಒಂದು ಗಂಡು, ಒಂದು ಹೆಣ್ಣು ಹೀಗೆ ಅವಳಿಜವಳಿ ಮಕ್ಕಳು ಹುಟ್ಟಿದರು. ಆ ಗಂಡುಮಗುವನ್ನು ಒಬ್ಬ ನಿಶಾಚರನು ಎತ್ತಿಕೊಂಡು ಹೋಗಿ ರಥನೂಪುರ ಚಕ್ರವಾಳಪುರದಲ್ಲಿ ಚೆಲ್ಲಿಬಿಟ್ಟು ಹೋಗುತ್ತಾನೆ. ಅಲ್ಲಿಯ ವಿದ್ಯಾಧರ ಅರಸನಾದ ಇಂದುಗತಿಯು ಪ್ರಭಾಮಂಡಲನೆಂಬ ಹೆಸರಿಟ್ಟು ಅವನನ್ನು ಸಲಹುವನು.

ಒಮ್ಮೆ ಕಿರಾತರ ಪಡೆಯು ಜನಕನ ರಾಜಧಾನಿಯನ್ನು ಮುತ್ತುವುದು. ಜನಕನು ದಶರಥನ ಸಹಾಯವನ್ನು ಕೋರುವನು. ರಾಮ-ಲಕ್ಷ್ಮಣರು ತಾವೇ ಹೋಗಿ ಕಿರಾತರನ್ನು ಸೋಲಿಸುವರು. ಜನಕನು ಆನಂದಭರಿತನಾಗಿ ಸೀತೆಯನ್ನು ರಾಮನಿಗೆ ಕೊಟ್ಟು ಮದುವೆಮಾಡುವ ಏರ್ಪಾಡು ಮಾಡುವನು. ನಾರದನು ಕುತೂಹಲದಿಂದ ಸೀತೆಯನ್ನು ನೋಡಬೇಕೆಂದು ಹವಣಿಸಿ, ಸಾಧ್ಯವಾಗದಿದ್ದುದರಿಂದ ಆಕೆಯ

ಚಿತ್ರವನ್ನು ತೆಗೆದುಕೊಂಡು ಹೋಗಿ ರಥನೂಪುರಚಕ್ರವಾಳ ಪುರದ ಉದ್ಯಾನದಲ್ಲಿಟ್ಟು ಅಲ್ಲಿಯೇ ವಿಶ್ರಮಿಸುವನು. ಹೇಗೋ ಅಲ್ಲಿಗೆ ಬಂದಿದ್ದ ಪ್ರಭಾಮಂಡಲನು ಆ ಚಿತ್ರವನ್ನು ನೋಡಿ ಮೋಹಿತನಾಗಿ ಮೂರ್ಛೆಹೋಗುವನು.

ಇಂದುಗತಿಯು ಪ್ರಭಾಮಂಡಲನ ಇಚ್ಛೆಯು ನೆರವೇರುವಂತೆ ಯತ್ನಿಸಿದನು. ಅವನ ಸೇವಕನಾದ ಒಬ್ಬ ವಿದ್ಯಾಧರನು ಕುದುರೆಯಾಗಿ ಜನಕನನ್ನು ತನ್ನ ಮೇಲೆ ಕೂಡಿಸಿಕೊಂಡು ಆಕಾಶ ಮಾರ್ಗದಿಂದ ಹಾರಿ ಬಂದು ಇಂದುಗತಿಗೆ ಒಪ್ಪಿಸಿದನು. ಜನಕನಿಂದ ಸೀತೆಯನ್ನು ರಾಮನಿಗೆ ಕೊಟ್ಟು ವಿವಾಹವನ್ನು ಮಾಡುವ ಸಿದ್ಧತೆಯಾಗಿರುವದನ್ನು ಇಂದುಗತಿಯು ಕೇಳಿ ದುರ್ಜೇಯವಾದ ವಜ್ರಾವರ್ತ, ಸಾಗರಾವರ್ತ ಎಂಬ ಬಿಲ್ಲುಗಳಲ್ಲಿ ಒಂದನ್ನು ಎತ್ತಿ ಮುರಿಯುವಂತಿದ್ದರೆ ಮಾತ್ರ ಅವರ ವಿವಾಹವಾಗುವಂತೆ ವಿಧಿಸಿ ಜನಕನನ್ನು ಬಿಡುಗಡೆ ಮಾಡಿದನು. ರಾಮನು ಸಹಜವಾಗಿ ವಜ್ರಾವರ್ತವನ್ನೆತ್ತಿ ಮುರಿದುಬಿಟ್ಟುದರಿಂದ ಸೀತಾಸ್ವಯಂವರವು ಪೂರ್ತಿಯಾಗಿ ರಾಮ-ಸೀತೆಯರು ತಮ್ಮ ರಾಜಧಾನಿಗೆ ತೆರಳಿದರು. ಪ್ರಭಾಮಂಡಲನು ತಾನು ಸೀತೆಯನ್ನು ತಂದೇ ತೀರುವೆನೆಂದು ಹೊರಟವನು, ಪೂರ್ವಜನ್ಮದ ಸ್ಮರಣೆಯಿಂದ ಸೀತೆಯು ತನ್ನ ತಂಗಿಯೆಂದರಿತು ಪಶ್ಚಾತ್ತಾಪದಿಂದ ಹಿಂದಿರುಗಿದನು.

ರಾಮನ ಪಟ್ಟಾಭಿಷೇಕಕ್ಕೆ ಕೈಕಯಿಯ ವರಗಳು ಅಡ್ಡಿಯಾಗುತ್ತವೆ. ರಾಮನು ಸೀತಾ-ಲಕ್ಷ್ಮಣರೊಡನೆ ಅರಣ್ಯಕ್ಕೆ

ಹೊರಡುತ್ತಾನೆ. ಒಂದು ದಿನ ಲಕ್ಷ್ಮಣನು ಅಡವಿಯಲ್ಲಿ ಅಡ್ಡಾಡುತ್ತಿದ್ದಾಗ ಥಳಥಳಿಸುವ ಒಂದು ಖಡ್ಗವನ್ನು ಕಂಡು ಅದನ್ನು ತೆಗೆದುಕೊಂಡು ಮುಂದಿನ ಪೊರೆಯನ್ನು ತರಿಯಲು ತರುಣನೊಬ್ಬನ ತಲೆಯು ತುಂಡಾಗಿ ಬಿದ್ದಿತು. ಅದು ರಾವಣನ ತಂಗಿಯಾದ ಚಂದ್ರನಖಿಯ ಮಗನಾದ ಶಂಬುಕನ ತಲೆ. ಖರನು ಅವನ ತಂದೆ. ಖರನೊಡನೆ ಯುದ್ಧಮಾಡಿ ಲಕ್ಷ್ಮಣನು ಖರನನ್ನು ಸಂಹರಿಸುವನು. ಚಂದ್ರನಖಿಯು ರಾವಣನಿಗೆ ಸೀತೆಯನ್ನು ಅಪಹರಿಸುವಂತೆ ಪ್ರೇರೇಪಿಸುವಳು. ರಾಮನು ಮಾಯಾಸುಗ್ರೀವನನ್ನು ಕೊಂದು, ಸುಗ್ರೀವನಿಗೆ ಅವನ ಪತ್ನಿಯಾದ ಸುತಾರೆಯನ್ನು ದೊರಕಿಸಿಕೊಟ್ಟ ಮೇಲೆ, ಹನುಮದ್ವೀಪದ ಅಧಿಪತಿಯಾದ ಹನುಮಂತನನ್ನು ಲಂಕಾ ಪಟ್ಟಣಕ್ಕೆ ಕಳಿಸಲಾಯಿತು. ಅವನು ಸಮುದ್ರವನ್ನು ಈಸಿ ಲಂಕೆಗೆ ಹೋಗಿ ರಾವಣನಿಗೆ ಬುದ್ಧಿವಾದವನ್ನು ಹೇಳಿದರೂ ಪ್ರಯೋಜನವಾಗಲಿಲ್ಲ. ಯುದ್ಧವು ಅನಿವಾರ್ಯವಾಯಿತು.

ಮುಂದೆ ರಾಮನು ಕಪಿಧ್ವಜರಾದ ವಾನರರ ಸೇನೆಯನ್ನು ಕೂಡಿಸಿಕೊಂಡು ಲಂಕೆಯನ್ನು ಮುತ್ತುವನು. ರಾಮ-ರಾವಣರ ಯುದ್ಧದಲ್ಲಿ ರಾವಣನ ತಲೆಯನ್ನು (೧೦ ತಲೆಗಳನ್ನಲ್ಲ) ತರಿದವನು ಲಕ್ಷ್ಮಣನು. ರಾಮನು ಮೋಕ್ಷಗಾಮಿಯಾದ ಚರಮದೇಹಧಾರಿಯಾಗಿದ್ದುದರಿಂದ ಈ ಹಿಂಸೆಯು ಅವನಿಂದ ನಡೆಯಲಿಲ್ಲ. ಸೀತೆಯನ್ನು ಕರೆದುಕೊಂಡು ರಾಮ-ಲಕ್ಷ್ಮಣರು ವಿನೀತಾಪುರಕ್ಕೆ ತೆರಳುವರು. ರಾಮನು ಬಹುಕಾಲದವರೆಗೆ ಧರ್ಮದಿಂದ ರಾಜ್ಯಪರಿಪಾಲನೆ ಮಾಡುವನು.

ಕೆಲಕಾಲದ ಮೇಲೆ ಸೀತೆಯನ್ನು ತ್ಯಜಿಸುವ ಪ್ರಸಂಗವು ರಾಮನಿಗೆ ಬರುವುದು. ಪುಂಡರೀಕಿಣಿಯ ವಜ್ರಜಂಘನೆಂಬ ಅರಸನ ಪತ್ನಿಯಾದ ಶೀಲವತಿಯ ಆಶ್ರಯದಲ್ಲಿ ಸೀತೆಯು ಲವ-ಕುಶರೆಂಬ ಮಕ್ಕಳನ್ನು ಪಡೆಯುವಳು. ಅವರು ದೊಡ್ಡವರಾದ ಮೇಲೆ ಯುದ್ಧಕ್ಕೆ ಸಾಗಿಬರುವರು. ನಾರದ ನಿಂದ ಅವರು ತನ್ನ ಮಕ್ಕಳೆಂದು ತಿಳಿದು ರಾಮನು ಅವರನ್ನು ಪರಿಗ್ರಹಿಸುವನು. ಲಕ್ಷ್ಮಣನ ಮೇಲಿನ ಮೋಹದಿಂದ ರಾಮನು ಮುಪ್ಪಿನಲ್ಲಿಯೂ ತಪಸ್ಸನ್ನು ಆಚರಿಸದೇ ಇರುವು ದನ್ನು ನೋಡಿ ದೇವತೆಗಳು ಒಂದು ದಿನ ಲಕ್ಷ್ಮಣನನ್ನು ಗತ ಪ್ರಾಣನನ್ನಾಗಿ ಮಾಡುವರು. ರಾಮನು ಆರು ತಿಂಗಳ ವರೆಗೆ ಆ ದೇಹವನ್ನು ಹೊತ್ತುಕೊಂಡೇ ತಿರುಗುವನು. ಕೊನೆಗೆ ನಿರ್ವೇಗವುಂಟಾಗಿ ತಪಸ್ಸನ್ನಾಚರಿಸಿ ಮೋಕ್ಷವನ್ನು ಪಡೆ ಯುವನು.

(೨) ಆಗಮಿಕ ಭಾರತ

ಆಗಮಿಕ ಭಾರತವು ಜೈನಪುರಾಣಗಳಲ್ಲಿ ಒಂದಾಗಿರು ವುದು. ಜೈನರಾಮಾಯಣದಂತೆ ಜೈನಭಾರತವೂ ವೈದಿಕ ಮಹಾಭಾರತದ ಕಥೆಗಿಂತ ಎಷ್ಟೋ ಅಂಶಗಳಲ್ಲಿ ವ್ಯತ್ಯಾಸ-ವುಳ್ಳದ್ದಾಗಿರುವುದು. ಕನ್ನಡ ಸಾಹಿತ್ಯದಲ್ಲಿ ಕವಿ ಸಾಳ್ವನೂ, ಬ್ರಹ್ಮಣಾಂಕನೂ, ಭಾರತವನ್ನು ಆಗಮಿಕ ಕಾವ್ಯವನ್ನಾಗಿ ರಚಿಸಿರುವರು. ಅವರು ರಚಿಸಿದ ಕಾವ್ಯಗಳ ಹೆಸರು "ಸಾಳ್ವಭಾರತ' ಹಾಗೂ "ಜಿನಭಾರತ". ಅವು ಷಟ್ಪದೀ ಕಾವ್ಯಗಳು. ಅವುಗಳಲ್ಲಿ ಕುರುವಂಶ ಹಾಗೂ ಹರಿವಂಶಗಳ ಐತಿಹ್ಯವಿದೆ.

ಆಗಮಿಕ ಭಾರತವನ್ನು ಉಸುರಿದವರೂ ಗೌತಮಗಣ-ಧರರೇ. ಕವಿಸಾಳ್ವನು ಭಾರತದ ಮೇಲ್ಮೆಯನ್ನು ಹೀಗೆ ಹೇಳಿದ್ದಾನೆ:

ಕೊಲಿಸಿದಾತನೆ ದೇವ, ಕೊಂದ-
ಗ್ಗಳಿಕೆಯಿಂದವೆ ಪುಣ್ಯ ಪುರುಷರು,
ಪಲವು ಮಾತೇನೈವರೊಡಹುಟ್ಟಿದರು ಸನ್ನುತರು ॥
ಲಲನೆಯೋರ್ವಳನಾಳ್ದರೆಂಬೀ
ಪೊಲೆನುಡಿಗೆ ಕಿವಿಗುಡದೆ, ಸಜ್ಜನ-
ರೊಲಿದು ಚಿತ್ತೈಸುವುದು ಜಿನಪಾವನ ಚರಿತ್ರೆಯನು ॥

ಮಹಾಭಾರತದ ಕಥೆಯು ಬಹುವಿಸ್ತಾರವಾಗಿರುವುದ-ರಿಂದ, ಅದರೊಳಗಿನ ವ್ಯತ್ಯಾಸಗಳನ್ನೆಲ್ಲ ಎತ್ತಿ ಹೇಳುವದನ್ನು ವಿಸ್ತಾರಭಯದಿಂದ ಬಿಟ್ಟುಬಿಡಬೇಕಾಗಿದೆ. ಆದರೆ ವೈದಿಕ ಹಾಗೂ ಜೈನಭಾರತದೊಳಗಿನ ಪರ್ವಗಳನ್ನು ಹೋಲಿಸಿ ನೋಡಿದರೆ ಈ ವ್ಯತ್ಯಾಸಗಳ ಸಾಮಾನ್ಯ ಕಲ್ಪನೆಯು ಬರು ವಂತಿದೆ. ಆದುದರಿಂದ ಅವುಗಳ ಪರಿವಿಡಿಯನ್ನು ಕೆಳಗೆ ಕಾಣಿಸಿದೆ :

| ವೈದಿಕ ಭಾರತ | ಜೈನ ಭಾರತ |
|---|---|
| (೧) ಆದಿಪರ್ವ | (೧) ಆದಿಪರ್ವ |
| (೨) ಸಭಾಪರ್ವ | (೨) ಅನ್ವಯಪರ್ವ |
| (೩) ಅರಣ್ಯಪರ್ವ | (೩) ವಸುದೇವಪರ್ವ |
| (೪) ವಿರಾಟಪರ್ವ | (೪) ಕೃಷ್ಣೋದಯ ಪರ್ವ |

(೫) ಉದ್ಯೋಗಪರ್ವ
(೬) ಭೀಷ್ಮಪರ್ವ
(೭) ದ್ರೋಣಪರ್ವ
(೮) ಕರ್ಣಪರ್ವ
(೯) ಶಲ್ಯಪರ್ವ
(೧೦) ಗದಾ(ಸೌಪ್ತಿಕ)ಪರ್ವ
(೧೧) ಸ್ತ್ರೀಪರ್ವ
(೧೨) ಶಾಂತಿಪರ್ವ
(೧೩) ಅನುಶಾಸನಪರ್ವ
(೧೪) ಅಶ್ವಮೇಧಿಕಪರ್ವ
(೧೫) ಆಶ್ರಮವಾಸಿಪರ್ವ
(೧೬) ಮೌಸಲಪರ್ವ
(೧೭) ಮಹಾಪ್ರಸ್ಥಾನಿಕಪರ್ವ
(೧೮) ಸ್ವರ್ಗಾರೋಹಣಪರ್ವ

(೫) ಕಂಸವರ್ಧನಪರ್ವ
(೬) ಅಭ್ಯುದಯಪರ್ವ
(೭) ಪ್ರದ್ಯುಮ್ನಪರ್ವ
(೮) ಇಂದ್ರಪರ್ವ
(೯) ಕಲ್ಯಾಣಪರ್ವ
(೧೦) ಅರಣ್ಯಪರ್ವ
(೧೧) ಉದ್ಯೋಗಪರ್ವ
(೧೨) ಯುದ್ಧಪರ್ವ
(೧೩) ಚಕ್ರಪರ್ವ
(೧೪) ದೀಕ್ಷಾಪರ್ವ
(೧೫) ಸಭಾಪರ್ವ
(೧೬) ನಿರ್ವಾಣ ಪರ್ವ

ಅಧ್ಯಾಯ ೪

# ಜೈನಪುರಾಣಗಳಲ್ಲಿ ಧರ್ಮ ಹಾಗು ಕಾವ್ಯ

## (೧) ಪುರಾಣರಚನೆಯಲ್ಲಿ ದ್ವಿವಿಧ ಉದ್ದೇಶ

ಜೈನಪುರಾಣಗಳ ಪ್ರಾಚೀನತೆ, ಅವುಗಳ ಲಕ್ಷಣ, ವೈಲಕ್ಷಣ್ಯಗಳು, ಕನ್ನಡಸಾಹಿತ್ಯದಲ್ಲಿ ಅವುಗಳ ಚರಿತ್ರೆ, ಅವುಗಳೊಳಗಿನ ಕಥೆಗಳ ವೈವಿಧ್ಯ—ಇವುಗಳ ವಿಷಯವಾಗಿ ಸಂಕ್ಷೇಪವಾಗಿ ಹಿಂದಿನ ಅಧ್ಯಾಯಗಳಲ್ಲಿ ನಿರೂಪಿಸಿದಂತಾಯಿತು. ಕನ್ನಡ ಸಾಹಿತ್ಯದಲ್ಲಿ ಈ ಪುರಾಣಕಾವ್ಯಗಳ ಪರಂಪರೆಯನ್ನು ಪ್ರಾರಂಭಿಸಿದ ಪಂಪನ ಘನವಾದ ಉದ್ದೇಶವು ಎಷ್ಟರಮಟ್ಟಿಗೆ ಸಫಲವಾಗಿರುವುದೆಂಬುದನ್ನು ಈ ಅಧ್ಯಾಯದಲ್ಲಿ ಮನನ ಮಾಡಬಹುದಾಗಿದೆ.

ಮಹಾಕವಿ ಪಂಪನ ಕಾವ್ಯೋದ್ದೇಶವನ್ನು ಅಭಿನವ ಪಂಪನು ಬಹು ಸುಂದರವಾಗಿ ಹೀಗೆ ವರ್ಣಿಸಿರುವನು :

ಉಪದೇಶಂಗೆಯ್ದು ಕಾವ್ಯಬ್ಬಲದಿಂದ
ಅಖಿಲಧರ್ಮಂಗಳಂ ಲೋಕಮಂ ಧ-
ರ್ಮಪರ ಪ್ರಸ್ತಾನದೊಳ್ ಯೋಜಿಸಿ
ಪರಮಪುರಾಣಂಗಳಂ ಪೇಟ್ದು ಕಲ್ಪಾಂ
ತಪರೀತಖ್ಯಾತಿಯಂ ತಾಳ್ದಿದ ಪರಮಕವಿಜ್ಯೇಷ್ಠರಾದರ್
ತದೀಯಾಂ-
ಘ್ರಿಪಯೋಜಂಗಳ್ ಮದೀಯಾಶಯ
ಮಣಿಭವನಕ್ಕಕ್ಕೆ ಪುಷ್ಪೋಪಹಾರಂ ।

ಮಹಾಕವಿ ಪಂಪನ ಕಾವ್ಯರಚನೆಯ ಉದ್ದೇಶವು ಹೀಗೆ ದ್ವಿವಿಧವಾಗಿದ್ದಿತು. "ನೆಗಟ್ದ ಆದಿಪುರಾಣದೊಳ್ ಅಱಿವುದು ಕಾವ್ಯಧರ್ಮಮುಮಂ ಧರ್ಮಮುಮಂ" ಎಂದು ಅವನು ಕಾವ್ಯಾರಂಭದಲ್ಲಿಯೇ ಅದನ್ನು ತಿಳಿಸಿದ್ದಾನೆ. ಅವನಿಗೆ ಅದರಿಂದ ಸಾಧಿಸಬೇಕಾಗಿದ್ದುದೆಂದರೆ: "ಇದುವೆ ಸುಕವಿ-ಪ್ರಮೋದ ಪ್ರದಂ; ಇದುವೆ ಸಮಸ್ತಭವ್ಯಲೋಕ ಪ್ರಮದ ಪ್ರದಂ." ಉತ್ತಮ ಕಾವ್ಯಧರ್ಮದ ಮುಖಾಂತರವಾಗಿ ಧರ್ಮ ಸಂಕೀರ್ತನೆಗೈಯುವ ಈ ಪದ್ಧತಿ ಅದ್ವಿತೀಯವಾದುದು. ಅದಕ್ಕೆ ಪಂಪನೇ ಪ್ರಥಮ ಆಚಾರ್ಯನು. ಜೈನಪುರಾಣ ಗಳಲ್ಲಿ ಈ ಧರ್ಮಸಂಕೀರ್ತನೆಯು ಕಾವ್ಯದ ಉದ್ದೇಶಕ್ಕೆ ಹಾಲಿ ನಲ್ಲಿ ಸಕ್ಕರೆ ಬೆರೆತಂತೆ ಸಾಮರಸ್ಯವನ್ನು ಪಡೆದಿರುವುದು ಬಹು ಮುಖ್ಯವಾದ ಲಕ್ಷಣವಾಗಿರುವುದು. ಹಳಗನ್ನಡಕಾವ್ಯ ಪ್ರಪಂಚಕ್ಕೆಯೆ ಇದು ಪಂಪನ ಕೊಡುಗೆಯಾಗಿರುವುದೆಂದರೆ ತಪ್ಪಾಗಲಾರದು. ಏಕೆಂದರೆ ಅವನ ಮುಂದಿನ ವೀರಶೈವ

ಹಾಗು ವೈದಿಕ ಕವಿಗಳ ಮಹಾಕಾವ್ಯಗಳಿಗೂ ಈ ಲಕ್ಷಣವು ಹೊರತಾಗಿರುವದಿಲ್ಲ.

ಇನ್ನು ಜೈನಪುರಾಣಗಳಲ್ಲಿ ಸಂಕೀರ್ತಿತವಾದ ಧರ್ಮದ ಸಾರವನ್ನೂ, ಪುರಾಣಕಾವ್ಯಗಳಿಗೆ ಅದರಿಂದುಂಟಾದ ಪ್ರಯೋಜನವನ್ನೂ ಸ್ವಲ್ಪಮಟ್ಟಿಗೆ ಗ್ರಹಿಸಬಹುದು.

## (೨) ಧರ್ಮಮುಮಂ....

ಧರ್ಮವು ಸನಾತನವೆಂದು ಭಾರತೀಯರೆಲ್ಲರ ನಂಬುಗೆ-ಯಿದೆ. ಜೈನಧರ್ಮವೂ ಹಾಗೆಯೇ ಎಂದು ಭಾವಿಸಲು ಅದನ್ನು ತೀರ್ಥಂಕರರು ಸಮವಸರಣದಲ್ಲಿ ತಮಗೆ ಪ್ರಾಪ್ತವಾದ ದಿವ್ಯವಾಣಿಯಿಂದ ಬೋಧಿಸಿದ್ದರೆಂಬುದೇ ಕಾರಣವಾಗಿದೆ. ಹಾಗೆ ಆದಿತೀರ್ಥಂಕರರು ಬೋಧಿಸಿದ ಧರ್ಮದ ತಿರುಳನ್ನು ಕೆಳಗಿನಂತೆ ಸಂಗ್ರಹಿಸಬಹುದು:

ಅಖಿಲವಸ್ತುಸ್ಥಿತಿಯು ಅಥವಾ ತತ್ವದ ರೂಪವು ಹೇಯ ಮತ್ತು ಉಪಾದೇಯ ಎಂದು ಎರಡು ವಿಧವಾಗಿರುವುದು. ಸಂಸಾರಕ್ಕೆ ಕಾರಣವಾಗಿರುವುದೆಲ್ಲವೂ ಹೇಯವು. ಮುಕ್ತಿಗೆ ಕಾರಣವಾಗಿರುವುದು ಉಪಾದೇಯವು. ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ, ಇವುಗಳ ವಿಭೇದದಿಂದ ಸಂಸಾರವು ಐದು ವಿಧವಾಗಿದೆ. ಸಂಸಾರದಲ್ಲಿ ತೊಡಗಿರುವುದಕ್ಕೂ ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ ಹಾಗು ಯೋಗ ಇವುಗಳಿಂದ ಉಪಾರ್ಜಿತವಾದ ಜ್ಞಾನಾವರಣಾದಿಕರ್ಮಗಳು ಕಾರಣವಾಗಿವೆ. ಕರ್ಮನಿಗಮನದಿಂದ (ಕರ್ಮಗಳ ಕ್ಷಯ್ಯದಿದ)

ಅನಂತಜ್ಞಾನಾದಿ ನಿಜರೂಪವನ್ನು ಪಡೆಯುವುದೇ ಮುಕ್ತಿ. ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ, ಸಮ್ಯಕ್‌ಚಾರಿತ್ರಗಳ ವಿಕಲ್ಪಗಳು ಮೋಕ್ಷಕಾರಣಗಳು. ಈ ಸಮ್ಯಕ್ತ್ವ (ರತ್ನತ್ರಯ) ಸಾಧನೆಯು ಕೆಳಗಿನಂತೆ ಇರುವುದು:

## ಅ ಸಮ್ಯಗ್ ದರ್ಶನ

ತತ್ವದ ಅರ್ಥದಲ್ಲಿ ಶ್ರದ್ಧೆಯುಂಟಾಗುವುದೇ ಸಮ್ಯಗ್-ದರ್ಶನವು. ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷ-ಹೀಗೆ ತತ್ವವು ಸಪ್ತವಿಧವಾಗಿದೆ. ಪ್ರಮಾಣ, ನಯ,ನಿಕ್ಷೇಪ ಅನುಯೋಗಾದಿಗಳಿಂದ ಅವುಗಳನ್ನು ನಿಶ್ಚಯಿಸಲಾಗಿದೆ. ಅವುಗಳ ವಿವರಣೆಯು ಕೆಳಗಿನಂತೆ ಇದೆ:

೧ **ಜೀವ :** ಚೇತನಾ ಲಕ್ಷಣವುಳ್ಳದ್ದು ಜೀವ ತತ್ವವು. ಸಂಸಾರಜೀವ, ಮುಕ್ತಿಜೀವವೆಂದು ಅದು ಎರಡು ವಿಧವಾಗಿರುವುದು. ಅವುಗಳೊಳಗೆ ಸಂಸಾರಿ ಜೀವಗಳಲ್ಲಿ ತ್ರಸ ಮತ್ತು ಸ್ಥಾವರ ಎಂದು ಎರಡು ಬಗೆ. ತ್ರಸಜೀವಗಳು ದ್ವೀಂದ್ರಿಯ (ಸ್ಪರ್ಶನ+ರಸನ; ಉದಾ: ಶಂಖ), ತ್ರೀಂದ್ರಿಯ (ಸ್ಪರ್ಶನ+ರಸನ+ಘ್ರಾಣ ; ಉದಾ : ಪಿಪೀಲಿಕಾ). ಚತು-ರಿಂದ್ರಿಯ (ಸ್ಪರ್ಶನ + ರಸನ + ಘ್ರಾಣ + ಚಕ್ಷು; ಉದಾ: ಮಧುಕರ) ಮತ್ತು ಪಂಚೇಂದ್ರಿಯ (ಸ್ಪರ್ಶನ + ರಸನ+ ಘ್ರಾಣ + ಚಕ್ಷು + ಶ್ರೋತ್ರ; ಉದಾ : ಮನುಷ್ಯ) ಎಂದು ನಾಲ್ಕು ವಿಧವಾಗಿವೆ. ಸ್ಪರ್ಶನವನ್ನು ಮಾತ್ರ ಅರಿಯಬಲ್ಲವುಗಳಾದುದರಿಂದ ಸ್ಥಾವರಗಳು ಏಕೇಂದ್ರಿಯಗಳು. ಅವು

ಪೃಥಿವಿ, ಅಪ್, ತೇಜ, ವಾಯು, ವನಸ್ಪತಿ ಎಂದು ಐದು ವಿಧವಾಗಿರುವುವು.

೨ ಅಜೀವ: ಚೇತನಾರಹಿತವಾದದ್ದು ಅಜೀವ ತತ್ವವು. ಅದು ಧರ್ಮ, ಅಧರ್ಮ, ಆಕಾಶ, ಪುದ್ಗಲ ಮತ್ತು ಕಾಲ ಎಂದು ಐದು ವಿಧವಾಗಿದೆ. ಅವು ಗತಿ–ಸ್ಥಿತಿ-ಅವಗಾಹ-ಶರೀರಾದಿ ವರ್ತನಾಹೇತುವಾಗಿರುವುವು.

೩ ಆಸ್ರವ : ಶುಭಾಶುಭರೂಪದಿಂದ ಕೂಡಿದ ಮನೋ–ವಾಕ್–ಕಾಯಗಳ ಪರಿಸ್ಪಂದನದ ಮೂಲಕವಾಗಿ ಹರಿದುಬರುವ ಕರ್ಮಪ್ರವಾಹಕ್ಕೆ ಆಸ್ರವತತ್ವವೆನ್ನುವರು.

೪ ಬಂಧ : ಹೀಗೆ ಹರಿದು ಬಂದು ಕರ್ಮಪ್ರವಾಹವು ಜೀವದಲ್ಲಿ ನೀರಕ್ಷೀರನ್ಯಾಯದಂತೆ ಬೆರೆತುಕೊಳ್ಳುವುದಕ್ಕೆ ಬಂಧ ತತ್ವವೆನ್ನುವರು.

೫ ಸಂವರ : ಶುಭಾಶುಭಪರಿಣಾಮವುಳ್ಳ ಪ್ರಣಾಳಿಕೆಗಳಿಂದ ಹರಿದುಬರುವ ಕರ್ಮವನ್ನು ಬರಲೀಯದೆ ಗುಪ್ತ್ಯಾದಿಗಳಿಂದ ಅದನ್ನು ತಡೆದು ನಿಲ್ಲಿಸುವುದೇ ಸಂವರ ತತ್ವವು.

೬ ನಿರ್ಜರೆ : ಹಳೆಯ (ಪೂರ್ವಾರ್ಜಿತ) ಕರ್ಮಗಳನ್ನು ನಿರ್ಜರಣ ಮಾಡುವುದು ನಿರ್ಜರಾತತ್ವವು. ಅದು ಸವಿಪಾಕ ಮತ್ತು ವಿಪಾಕ ಎಂದು ಎರಡು ವಿಧ. ಕಾಲಾನು-ಕ್ರಮದಲ್ಲಿ ಅನುಭವಿಸಿ ಕರ್ಮವು ಪರಿಪಕ್ವಗೊಂಡು ಕಳಚಿ ಹೋಗುವುದು ಸವಿಪಾಕನಿರ್ಜರೆ. ಅಪಕ್ವವಾಗಿದ್ದ ಕರ್ಮ–

ವನ್ನು ತಪೋನಿಮಿತ್ತವಾಗಿ ಪಕ್ವಗೊಳಿಸಿ ಕಳಚಿಹೋಗುವಂತೆ ಮಾಡುವದು ವಿಪಾಕನಿರ್ಜರೆ.

೭) **ಮೋಕ್ಷ :** ಮೂಲಪ್ರಕೃತಿ, ಉತ್ತರಪ್ರಕೃತಿ ಎಂದು ಮುಂತಾಗಿ ಭಿನ್ನಭೇದಗಳುಳ್ಳ ಕರ್ಮಪ್ರಕೃತಿಗಳ ನಿರ್ಮೂಲೋಚ್ಛಿತ್ತಿಯು ಮೋಕ್ಷತತ್ವವೆನಿಸುವದು. ಘಾತಿ-ಅಘಾತಿ ಎಂಬ ಪ್ರಕಾರಗಳಿಂದ ಕೂಡಿದ ಮೂಲ ಪ್ರಕೃತಿಯಲ್ಲಿ ಒಟ್ಟಿಗೆ ಎಂಟು ಪ್ರಕಾರದ ಕರ್ಮಗಳೂ, ಉತ್ತರ ಪ್ರಕೃತಿಯಲ್ಲಿ ೧೪೮ ಪ್ರಕಾರದ ಕರ್ಮಗಳೂ ಒಳಗೊಂಡಿರುವುವು. ಕರ್ಮ ಬಂಧವು ನಿರ್ಮೂಲವಾಗಿ ಕಳಚಿಬಿದ್ದ ಮೇಲೆ ಜೀವವು ಅಜೀವದಿಂದ ಬಿಡುಗಡೆ ಹೊಂದಿ ಮೋಡಗಳಿಂದ ಬಿಡುಗಡೆ ಹೊಂದಿದ ಹುಣ್ಣಿಮೆಯ ಚಂದ್ರನಂತೆ ತನ್ನ ನಿಜ ಸ್ಥಿತಿಯನ್ನು ಪಡೆಯುವುದು. ಆಗ ಅನಂತಚತುಷ್ಟಯ (ಅನಂತ ಜ್ಞಾನ, ಅನಂತದರ್ಶನ, ಅನಂತವೀರ್ಯ. ಅನಂತಸುಖ) ದಿಂದ ಅದು ಪ್ರಕಾಶಿಸತೊಡಗುವುದು.

## ಆ. ಸಮ್ಯಗ್‌ಜ್ಞಾನ

ಯಾವ ಸಂಶಯ-ವಿಪರ್ಯಯವೂ ಇಲ್ಲದಂತೆ ಸಾವದ್ಯ-ಅವಸಾಯರಹಿತವಾಗಿ ಜೀವಾದಿತತ್ವಗಳು ಹೇಗೆ ಇವೆಯೋ ಹಾಗೆಯೇ ನಿಜಸ್ಥಿತಿಯನ್ನು ತಿಳಿಯುವುದು ಸಮ್ಯಗ್ ಜ್ಞಾನವು. ಅದು ಮತಿ, ಶ್ರುತ, ಅವಧಿ, ಮನಃಪರ್ಯಯ ಹಾಗೂ ಕೇವಲ ಎಂದು ಐದು ವಿಧವಾಗಿದೆ.

## ೩. ಸಮ್ಯಕ್‌ಚಾರಿತ್ರ

ಸಂಸಾರ ಪರಿತ್ಯಾಗಕ್ಕೆ ಉದ್ಯುಕ್ತಗೊಳಿಸುವ ಸಮ್ಯಗ್‌ಜ್ಞಾನದಿಂದ ಪ್ರೇರಿತವಾದ ಭವ್ಯಜೀವನ ಬಾಹ್ಯ ಮತ್ತು ಅಭ್ಯಂತರ ಕ್ರಿಯಾನಿವೃತ್ತಿಯು ಸಮ್ಯಕ್‌ಚಾರಿತ್ರವು. ಅದು ಸಾಮಾಯಿಕ, ಛೇದೋಪಸ್ಥಾಪನಾ, ಪರಿಹಾರಶುದ್ಧಿ, ಸೂಕ್ಷ್ಮ ಸಾಂಪರಾಯ ಮತ್ತು ಯಥಾಖ್ಯಾತ ಎಂದು ಐದು ವಿಧವಾಗಿರುವುದು.

ತೀರ್ಥಂಕರರು ಉಸುರಿದ ಧರ್ಮವು ಶ್ರುತಿಪರಂಪರೆಯಿಂದ ಚತುರನುಯೋಗಸಮನ್ವಿತವಾದ ಶ್ರುತಸ್ಕಂಧವೆಂಬ ಹೆಸರಿನಿಂದ ಲೋಕವಿಶ್ರುತವಾಗಿದೆ. ತತ್ವಾರ್ಥಭಾಷ್ಯ, ಶಾಸ್ತ್ರಸಾರಸಮುಚ್ಚಯ ಮುಂತಾದ ಗ್ರಂಥಗಳ ಮುಖಾಂತರವಾಗಿ ಪೂರ್ವಾಚಾರ್ಯರು ಅದನ್ನು ದಕ್ಷಿಣ ದೇಶದಲ್ಲಿ ಪ್ರಚುರಗೊಳಿಸಿರುವರು.

ಬುದ್ಧಿಪುರಸ್ಸರವಾದ ಶ್ರದ್ಧೆ, ಭಕ್ತಿಪೂರ್ವಕವಾದ ಭಾವ ಹಾಗೂ ಕ್ರಿಯಾನಿಷ್ಠವಾದ ಆಚಾರ–ಇವೇ ಈ ಧರ್ಮದ ಮುಖ್ಯ ಲಕ್ಷಣಗಳಾಗಿರುವುವು. "ಆಚಾರಃ ಪರಮೋ ಧರ್ಮಃ" ಎಂಬುದು ಈ ಧರ್ಮದ ವೈಶಿಷ್ಟ್ಯವಾಗಿರುವುದು. ಆಚಾರ್ಯರಿಗೆ ಉಕ್ತವಾಗಿರುವ ೩೬ ಗುಣಗಳಲ್ಲಿ ಈ ಧರ್ಮದ ಪರಮೋಚ್ಚವಾದ ಆಚಾರಾಂಶಗಳನ್ನು ಕಂಡುಕೊಳ್ಳಬಹುದು. ಅವು ಯಾವುವೆಂದರೆ:

೧. ಪಂಚಾಚಾರಗಳು: ಜ್ಞಾನಾಚಾರ, ದರ್ಶನಾಚಾರ, ತಪಾಚಾರ, ಚಾರಿತ್ರ್ಯಾಚಾರ ಹಾಗು ವೀರ್ಯಾಚಾರ.

೨. ಬಾಹ್ಯತಪಗಳು ಆರು: ಅನಶನ, ಅವಮೋದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯ್ಯಾಸನ, ಹಾಗು ಕಾಯಕ್ಲೇಶ.

೩. ಅಂತರಂಗತಪಗಳು ಆರು: ಪ್ರಾಯಶ್ಚಿತ್ತ, ವಿನಯ, ವೈಯಾವೃತ್ತ, ಸ್ವಾಧ್ಯಾಯ, ಉತ್ಸರ್ಗ ಮತ್ತು ಧ್ಯಾನ.

೪. ಷಡಾವಶ್ಯಕಗಳು: ಸಮತಾ, ಸ್ತವನ, ವಂದನಾ, ಪ್ರತಿಕ್ರಮಣ, ಪ್ರತ್ಯಾಖ್ಯಾನ ಮತ್ತು ಕಾಯೋತ್ಸರ್ಗ.

೫. ದಶವಿಧ ಧರ್ಮಗಳು: ಉತ್ತಮಕ್ಷಮಾ, ಉತ್ತಮ ಮಾರ್ದವ, ಉತ್ತಮಅರ್ಜವ, ಉತ್ತಮಶೌಚ, ಉತ್ತಮ ಸತ್ಯ, ಉತ್ತಮ ಸಂಯಮ, ಉತ್ತಮ ತಪ, ಉತ್ತಮ ತ್ಯಾಗ, ಉತ್ತಮ ಅಕಿಂಚನ್ಯ ಹಾಗು ಉತ್ತಮ ಬ್ರಹ್ಮಚರ್ಯ.

೬. ತ್ರಿಗುಪ್ತಿಗಳು: ಮನೋಗುಪ್ತಿ, ವಾಗ್ಗುಪ್ತಿ, ಕಾಯ-ಗುಪ್ತಿ.

ಇವು ಒಟ್ಟಿಗೆ ೩೬ ಗುಣಗಳು.

ಸಂಕ್ಷಿಪ್ತವಾಗಿ ಹೇಳಬೇಕಾದರೆ, ಜೈನಧರ್ಮವು ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ನಿಃಪರಿಗ್ರಹ ಎಂಬ ಪಂಚಮಹಾವ್ರತಗಳಿಂದ ಪ್ರಧಾನವಾಗಿರುವುದೆಂದು ಹೇಳು

ವುದು ವಾಡಿಕೆಯಿರುವುದು. ಇವುಗಳನ್ನೇ "ಪಂಚಶೀಲ"* ಗಳೆಂದು ಸದಾಚಾರಗಳ ಮಾಲಿಕೆಯಲ್ಲಿ ಸೇರಿಸಿ ಬುದ್ಧನೂ ಬೋಧಿಸಿರುವುದನ್ನು ಸ್ಮರಿಸಿಕೊಳ್ಳಬೇಕಾಗಿದೆ. ಪುರಾಣ ಕಾವ್ಯದ ನಾಯಕ-ನಾಯಿಕಾವರ್ಗವು ಇವುಗಳ ಆಚರಣೆಯು ಪರಮೋಚ್ಚ ಆವಿಷ್ಕರಣದ ಪ್ರತೀಕಗಳಾಗಿರುವುವೆಂದರೆ ತಪ್ಪಾಗ ಲಾರದು.

ಇಂಥ ಧರ್ಮದ ಎತ್ತರವಾದ ಗೋಡೆಯ ಮೇಲೆ ಮಹಾಕವಿ ಪಂಪನು ತನ್ನ ಕಾವ್ಯದ ಬಳ್ಳಿಯನ್ನು ಹಬ್ಬಿಸಿರುವನು. ಆದರೆ ಈ ಎತ್ತರವಾದ ಗೋಡೆಯನ್ನು ಹತ್ತಲಾರದವರು ಅದರ ಮೇಲೆ ಬೆಳೆದ ದ್ರಾಕ್ಷೆಯ ಹಣ್ಣುಗಳು ಹುಳಿಯಾಗಿರುವುವೆಂದು ಹೇಳಬಹುದಾದುದೂ ಹೆಚ್ಚು ಸಂಭವನೀಯವಾಗಿರುವುದು.

ಭಾರತೀಯ ದರ್ಶನಗಳಲ್ಲಿ ಜೈನಧರ್ಮದ ಸ್ಥಾನ–ಮಾನವೇನೆಂಬುದನ್ನು ವಿವರಿಸುತ್ತ ಡಾ. ರಾಧಾಕೃಷ್ಣನ್ನರವರು ತಮ್ಮ **"Indian Religious thought and Modern Civilization"** ಎಂಬ ವ್ಯಾಖ್ಯಾನದಲ್ಲಿ ಈ ಧರ್ಮದ ಹಿರಿಮೆಯ ಬಗೆಗೆ ಪ್ರಕಟಿಸಿರುವ: "Jainism emphasises the

---

* ಪಂಚಶೀಲಗಳು :–
  ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
  ಬ್ರಹ್ಮಚರ್ಯ ಬಿಡಬೇಡ ಮತ್ತು ಕುಡಿವೆಡೆಗಳಂ
  ನೋಡಬೇಡ; ಎಂಬಿವು.

potential divine stature of man and its teaching claims to be of universal application" ಈ ಅಭಿಪ್ರಾಯವು ಇಲ್ಲಿ ಉಲ್ಲೇಖನೀಯವಾಗಿರುವುದು.*

(೨) ಕಾವ್ಯಮುಮಂ....

ಮೇಲಿನ ವಿವೇಚನೆಯಲ್ಲಿ ಪುರಾಣಕಾವ್ಯಗಳಲ್ಲಿ ಒಂದು ಮುಖ್ಯ ಅಂಗವಾದ ಧರ್ಮದ ಸ್ವರೂಪವನ್ನು ವಿವರಿಸಿದಂತಾಯಿತು. ಧರ್ಮದ ನಿರೂಪಣವೇ ಛಂದೋಬದ್ಧವಾಗಿ ಆಗಿದ್ದರೆ ಅದು ನಯಸೇನನ "ಧರ್ಮಾಮೃತ"ದಂತೆ ಶಾಸ್ತ್ರ-ಗ್ರಂಥವಾಗುತ್ತಿತ್ತೇ ಹೊರತು ಕಾವ್ಯವಾಗುತ್ತಿರಲಿಲ್ಲ. ಪಂಪನು ತನ್ನ ಮಹಾಕಾವ್ಯಕ್ಕೆ ಧರ್ಮದ ಹಿನ್ನೆಲೆಯನ್ನು ಕಲ್ಪಿಸಿದ್ದಾನೆ. ಆದುದರಿಂದಲೇ ಧರ್ಮದ ಎತ್ತರವಾದ ಗೋಡೆಯ ಮೇಲೆ ಅವನು ತನ್ನ ಕಾವ್ಯರೂಪವಾದ ದ್ರಾಕ್ಷೆಯ ಬಳ್ಳಿಯನ್ನು ಹಬ್ಬಿಸಿರುವನೆಂದು ಮೇಲೆ ನಿರೂಪಿಸಿದ ರೂಪಕದ ಔಚಿತ್ಯವನ್ನು ಅರಿತುಕೊಳ್ಳಬಹುದಾಗಿದೆ.

ಪಂಪನು ಪ್ರಸ್ಥಾಪಿಸಿದ ಪುರಾಣಕಾವ್ಯಪರಂಪರೆಯನ್ನು ಅನುಸರಿಸಿದ ಮುಂದಿನ ಕವಿಗಳು ಪಂಪನನ್ನು ನುತಿಸುವಾಗ ತಾವು ಆದರ್ಶವಾಗಿಟ್ಟುಕೊಂಡ ಕೆಲವೊಂದು ಕಾವ್ಯಾಂಶಗಳನ್ನು ಎತ್ತಿ ಹೇಳಿರುವರು. ಅವುಗಳಲ್ಲಿ ಮುಖ್ಯವಾದುವುಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು ;

---

* Oriental Conference at Tirupathy (Presidential address)

"ಪಂಪನ ಸನ್ನುತಕವಿತಾಗುಣ"ವನ್ನು ಕರ್ಣಪಾರ್ಯನೂ, "ಪಂಪನ ಗುಣಂ" ಎಂದು ಮಲ್ಲಿಕಾರ್ಜುನನೂ ಉಲ್ಲೇಖಿಸಿರುವದರಿಂದ, "ಪ್ರಾಣಾಃ ದಶಗುಣಾಸ್ಮೃತಾಃ" ಎಂದಿರುವ ದಂಡಿಯ ಕಾವ್ಯಾದರ್ಶವನ್ನು ಪಂಪನು ಅನುಸರಿಸುತ್ತಿರುವನೆಂದು ವ್ಯಕ್ತವಾಗುವುದಲ್ಲದೆ, ಆ ಗುಣಗಳಲ್ಲಿಯೂ ಅವನ ಕಾವ್ಯದಲ್ಲಿ ಓಜಸ್ಸು ("ಪಂಪನೋಜೆ" : ಒಂದನೆಯ ಹಾಗೂ ಎರಡನೆಯ ಗುಣವರ್ಮರು), ಕಾಂತಿ ("ನುಣ್ಪುವೆತ್ತ ನುಡಿ" : ಪಾರ್ಶ್ವಪಂಡಿತ), ಸೌಕುಮಾರ್ಯ ("ನಯದಿಂ ಪಂಪನೊಲ್ದು ನಿರ್ಮಿಸಿದ" : ಅಗ್ಗಳ), ಮಾಧುರ್ಯ ("ಎನಗನುಕೂಲಮಕ್ಕೆ ಪಂಪನಿಂಪು" : ಜನ್ನ) – ಇವುಗಳ ವರ್ಣನೆಯನ್ನು ಇತರ ಕವಿಗಳು ವಿಶೇಷವಾಗಿ ಮಾಡಿರುವರು. ಪಂಪನು ತಾನೇ" ಪ್ರಾತೀತಿಕಂ, ಕೋಮಲಂ, ಅತಿಸುಭಗಂ, ಸುಂದರಂ, ಸೂಕ್ತಿಗರ್ಭಂ, ಮೃದುಸಂದರ್ಭಂ, ವಿಚಾರಕ್ಷಮಂ, ಉಚಿತಪದಂ, ಶ್ರವ್ಯಂ, ಅವ್ಯಾಕುಳಂ"—ಈ ದಶಗುಣಗಳಿಂದ ತನ್ನ ಕಾವ್ಯವು ದಿಗಂತವ್ಯಾಪ್ತವಾಗಿರುವುದೆಂದು ಹೇಳಿರುವನು. ಅಂತೆಯೇ ಆತನ "ವಾಗ್ವಿಭವೋನ್ನತಿ"ಯನ್ನು ರನ್ನನೂ, "ವಚೋವಿಳಾಸ" ವನ್ನು ನಾಗರಾಜನೂ ವರ್ಣಿಸಿರುವರಲ್ಲದೆ, "ಸತ್ಕವಿಪಂಪನ.... (ಕಾವ್ಯವು) ಕೃತಿ ಸುಂದರೀ ಸುಭಗಂ" ಎಂದು ಕಮಲಭವನು ಶ್ಲಾಘಿಸಿರುವನು.

ರುದ್ರಭಟ್ಟನು "ಪಂಪನ ರೀತಿ" ಯನ್ನು ಪ್ರಶಂಸಿಸಿರುವನು. ವಚನವಿನ್ಯಾಸಕ್ರಮವೇ ರೀತಿಯಾಗಿರುವುದಾದರೂ, "ರೀತಿರಾತ್ಮಾಕಾವ್ಯಸ್ಯ" ಎಂಬ ವಾಮನನ ಕಾವ್ಯಮಾರ್ಗದ

ಆದರ್ಶವನ್ನೂ ಅದು ಎತ್ತಿ ತೋರಿಸುವುದು. ಇದರಿಂದ ಪಂಪನು ಆಲಂಕಾರಿಕರಾದ ದಂಡಿ, ಭಾಮಹ, ಮತ್ತು ವಾಮನರನ್ನು ಅನುಸರಿಸಿ ಕನ್ನಡ ಕವಿಗಳಿಗೆ ಮಾರ್ಗದರ್ಶಕನಾಗಿದ್ದನೆಂಬುದು ಅಭಿವ್ಯಕ್ತವಾಗಿರುವುದು.

ಇವೆಲ್ಲವುಗಳಿಗೆ ಮಿಗಿಲಾಗಿ ಅವನ ವಸ್ತುವಿನ್ಯಾಸವನ್ನು ನಾವು ಗಮನಿಸಬೇಕು. ಅವನ ಕಾವ್ಯದ ವಸ್ತುವು ತೀರ್ಥಂಕರ ಚರಿತ್ರೆಯು. ಅದರ ಹಿನ್ನೆಲೆಯು ಧರ್ಮವಾಗಿರುವುದರಿಂದ ಧರ್ಮದ ಪಾತ್ರದೊಳಗಿಂದಲೇ ಅವನ ಕಾವ್ಯ-ವಾಹಿನಿಯು ಪ್ರವಹಿಸುತ್ತಿರುವುದೆಂದು ನಾವು ಭಾವಿಸಬಹುದು. ಒಂದು ರೀತಿಯಿಂದ ಅದು ಧ್ವನಿಕಾವ್ಯ. ಧರ್ಮವೇ ಅದರ ಧ್ವನಿಯೆಂದು ನಾವು ಪರಿಗಣಿಸಬಹುದಾಗಿದೆ.

ಮಹಾಕಾವ್ಯವು ನವರಸಭರಿತವಾಗಿರುವುದೆಂದು ಹೇಳು-ವುದು ವಾಡಿಕೆಯಾಗಿದೆ. ಆದರೆ ಪಂಪನು ತನ್ನ ಕಾವ್ಯದ ವಿಷಯವಾಗಿ ಹಾಗೆ ಹೇಳಿರುವುದಿಲ್ಲ. ಅದು "ರಸಭಾವೋ-ಪೇತ ಧರ್ಮಾಮೃತರಸಮಯ"ವು ಎಂದು ಅವನು ಹೇಳಿ-ದ್ದಾನೆ. ಎಂದರೆ ಅದು ರಸಭಾವಗಳಿಂದ ಕೂಡಿದುದು; "ಧರ್ಮಾಮೃತರಸ" ವೊಂದರಿಂದಲೇ ತುಂಬಿರುವುದು. ಹೀಗೆಂದುದರ ಔಚಿತ್ಯವನ್ನು ನಾವು ಅರಿತುಕೊಳ್ಳುವುದು ಅವಶ್ಯಕವಾಗಿರುವುದು.

"ಶಿವಂ ಪಾರ್ವತೀಶಂ ಪಂಪಾಪುರಪತಿ ದಯೆಯಿಂ ರಕ್ಷಿಕ್ಕೆಯೆಮ್ಮಂ" ಎಂಬ ಪೂಜ್ಯಭಾವದಿಂದ "ಗಿರಿಜಾಕಲ್ಯಾಣ"

ವನ್ನು ಓದುತ್ತಿರುವಾಗ, ಶಿವಪಾರ್ವತಿಯರ ರತ್ಯಾದಿ ಭಾವಗಳನ್ನು ಆವಿಷ್ಕರಿಸುವ ವಿಭಾವಾನುಭಾವಾದಿಗಳ ಪ್ರಕರ್ಷವು ಕಂಡುಬಂದರೂ ಅದು ರಸವಾಗಿ ಪರಿಣಮಿಸುವುದಿಲ್ಲ. ಯಾಕೆಂದರೆ, ಅಂಥ ಸ್ಥಾಯೀಭಾವಗಳು ದೇವತಾಗುರುಜನಗಳಲ್ಲಿರುವಂತೆ ವರ್ಣಿಸಲ್ಪಟ್ಟರೆ ಅದು ರಸಭಾವವೆನಿಸುವುದೇ ಹೊರತು ರಸವಲ್ಲವೆಂದು ಆಲಂಕಾರಿಕರು ಅಭಿಪ್ರಾಯಪಟ್ಟಿರುವರು, "ಜಗತ್‌ಸ್ವಾಮಿ ಸಂದ ಆದಿಬ್ರಹ್ಮಂ ದಯೆಗೆಯ್ವನಕ್ಕೆಮಗೆ" ಎಂದು ಹೇಳಹೊರಟ "ಆದಿಪುರಾಣ"ದಲ್ಲಿಯೂ ಅದೇ ಸ್ಥಿತಿಯಾಗಿರುವುದು.

ಭಾವವೆಂದರೆ ಚಿತ್ತವೃತ್ತಿ. ಆಲಂಕಾರಿಕರು ಇವುಗಳನ್ನು ವಿಕಾರಗಳೆಂದು ಪರಿಗಣಿಸಿ ಮಹಾಸಾಗರದಲ್ಲಿ ಏಳುವ ಅಲೆಗಳಿಗೆ ಹೋಲಿಸಿರುತ್ತಾರೆ. ನಾಟ್ಯಶಾಸ್ತ್ರದಲ್ಲಿ ಹೇಳಿರುವ ಎಂಟು ರಸಗಳೂ ಇಂಥ ಅಲ್ಲೋಲಕಲ್ಲೋಲಕ್ಕೆ ಒಳಗಾಗಿವೆ. ಶೃಂಗಾರವಂತೂ ಚಿತ್ತವಿಭ್ರಮದ ಅಧಿಪತಿಯಾಗಿದೆ. ತೀರ್ಥಂಕರರ ಚರಿತ್ರೆಗಳಲ್ಲಿ ಈ ಚಿತ್ತವಿಭ್ರಮದ ಸಂಭ್ರಮಕ್ಕೆ ಸ್ಥಾನವಿದೆಯೆ ? ಈ ಪ್ರಶ್ನೆಗೆ ಉತ್ತರವನ್ನೀಯುವ ಪ್ರಸಂಗವು ಆದಿಪುರಾಣವನ್ನು ಸಂಸ್ಕೃತದಲ್ಲಿ ರಚಿಸಿದ ಜಿನಸೇನಾಚಾರ್ಯರಿಗೇ ಬಂದಿತ್ತಂತೆ. ದಿಗಂಬರರಾದ ಅವರು ಇಡಿಯ ಪುರಾಣವನ್ನೇ ಜನಸಮುದಾಯದ ಮುಂದೆ ಓದಿ ತೋರಿಸಿದಾಗ ಅವರ ಮೈಮೇಲೆ ಯಾವ ಸಂಚಾರಿಭಾವವೂ ಕಂಡುಬರಲಿಲ್ಲವಂತೆ. ಈ ಸಂಪ್ರದಾಯಕ್ಕೆ ಅನುಗುಣವಾಗಿಯೇ ಪಂಪನ ಕಾವ್ಯವೂ ರಸಭಾವೋಪೇತವಾಗಿರುವುದು. ಆದರೆ

ಒಂಬತ್ತನೆಯ ರಸವಾದ ಶಾಂತವು ಮಾತ್ರ ಅಲ್ಲಿ ಮುಖ್ಯ- ವಾಗಿರುವುದು. ಅಂತೆಯೇ ಅದು “ಧರ್ಮಾಮೃತ ರಸ ಮಯ”ವು ಎಂದು ಪಂಪನು ಹೇಳಿರುವುದರ ಇಂಗಿತವಾಗಿರು ವುದು. ಈ ಇಂಗಿತವನ್ನು “ಮಲ್ಲಿನಾಥಪುರಾಣ” ದೊಳಗಿನ “ಅಭಿನವ ಪಂಪ”ನ ಕೆಳಗಿನ ಮಾತಿನಿಂದ ನಾವು ಸ್ಪಷ್ಟವಾಗಿ ಗೊತ್ತುಮಾಡಿಕೊಳ್ಳಬಹುದು: —

ನಿನಗೆ ರಸಮೊಂದೆ ಶಾಂತಮೆ
ಜಿನೇಂದ್ರ ಮನವಾ ರಸಾಂಬುನಿಧಿಯೊಳಗವಗಾ-
ಹನಮಿರ್ದು ಮಿಕ್ಕ ರಸಮಂ
ಕನಸಿನೊಳಂ ನೆನೆಯದಂತು ಮಾಡೆನಗರುಹಾ

“ಸಮಭಾವಪ್ರಭವಂ ಶಾಂತಂ” ಎಂದಿರುವುದರಿಂದ ಶಾಂತರಸವು ಸಮಭಾವವನ್ನೇ ಉತ್ಕರ್ಷಗೊಳಿಸುವುದೆಂಬುದು ಸ್ಪಷ್ಟವಾಗುವುದು. ಅದರ ಆಲಂಬನ ಹಾಗು ಉದ್ದೀಪನ ವಿಭಾವಗಳು ಧರ್ಮದ ಸನ್ನಿವೇಶಗಳು. ನಿರ್ವೇದ ಅಥವಾ ಚಿತ್ತವೃತ್ತಿನಿರೋಧವೇ ಅದರ ಅನುಭಾವವು. ಇಂಥ ಸಮತ್ವದ ಮನೋಭಾವವು ಯೋಗಕ್ಕೆ ನಾಂದಿಯಾಗುವುದರಿಂದ, ಪಂಪನು ತನ್ನ ಪುರಾಣರಚನೆಯಿಂದ ಕಾವ್ಯಯೋಗದ ಒಂದು ಪಂಥವನ್ನೇ ಸಾಧಿಸಲು ಹೊರಟಿರುವನೆಂದು ಭಾವಿಸ ಬಹುದು. ಕಾವ್ಯದ ಉದ್ದೇಶವು ಆನಂದವ್ಯಂಜನವೆಂಬುದು ಸರಿಯಷ್ಟೆ ? ಅಂತೆಯೇ ಕಾವ್ಯಯೋಗದ ಉದ್ದೇಶವೂ ಅದಕ್ಕೂ ಉನ್ನತವಾದ ಬೇರೊಂದು ನಿರ್ವ್ಯಾಜವೂ, ಉಜ್ವಲವೂ ಆದ ಪರಮಾನಂದದ ಕಡೆಗೆ ಬೊಟ್ಟುಮಾಡಿ ತೋರಿಸು ವುದೆಂದು ಕಲ್ಪಿಸಿದರೆ ತಪ್ಪಾಗಲಾರದಷ್ಟೇ ?

ಈ ದೃಷ್ಟಿಯಿಂದ ವಿಚಾರ ಮಾಡಿದರೆ, ಕನ್ನಡಸಾಹಿತ್ಯದಲ್ಲಿ ಪುರಾಣಕಾವ್ಯಗಳಿಗೆ ಗುರುವೆನಿಸಿದ ಪಂಪ ಮಹಾಕವಿಯ "ಧರ್ಮಮುಮಂ, ಕಾವ್ಯಮುಮಂ" ಎಂಬೀ ದ್ವಿವಿಧ ಕಾವ್ಯೋದ್ದೇಶವು ಪಾಶ್ಚಾತ್ಯ ಕಾವ್ಯಮೀಮಾಂಸಕರು ಸಾರಿದ "Literature of Knowledge" ಮತ್ತು "Literature of power" ಎಂಬ ಸಾಹಿತ್ಯೋದ್ದೇಶಗಳಿಗೆ ಸಮಾನವಾಗಿರುವು ದೆಂದು ಭಾವಿಸಬಹುದಾಗಿದೆ. ಜಗತ್ತಿನೊಳಗಿನ ಉಚ್ಚ-ತಮವಾದ ಸಾಹಿತ್ಯದ ಉದ್ದೇಶಗಳನ್ನು ಘೋಷಿಸಿದ ಲೋಂಗಿನಸ್ ಎಂಬ ಗ್ರೀಕ ವಿದ್ವಾಂಸನು ಅವು : ಉಪದೇಶ, ಆನಂದವ್ಯಂಜನ, ಪ್ರೇರೇಪಣೆ— to instruct, to delight, to persuade— ಎಂದು ಮೂರು ತೆರನಾಗಿವೆ ಎಂದು ಪ್ರಸ್ತಾಪಿಸಿರುವನು. ಅವುಗಳಲ್ಲಿ ಮೊದಲಿನವೆರಡು ಉದ್ದೇಶಗಳೂ ಪಂಪನ ದ್ವಿವಿಧ ಉದ್ದೇಶಗಳೂ ಒಂದೇ ಆಗಿರುವು-ವೆಂಬುದು ಸ್ಪಷ್ಟವಾಗಿ ಎದ್ದು ಕಾಣುವುದು. ಮೂರನೆಯ ಉದ್ದೇಶವಾದ "ಪ್ರೇರೇಪಣೆ" ಯೆಂಬುದು ಪಂಪನ ದರ್ಶನ ಹಾಗು ಅವನು ಜನತೆಯ ಮುಂದೆ ಇಟ್ಟಿರುವ ಆದರ್ಶ ಇವುಗಳ ಮೇಲಿಂದ ಹೇಗೆ ಪ್ರತೀತವಾಗಿರುವುದೆಂಬುದನ್ನು ಮುಂದಿನ ಅಧ್ಯಾಯದಲ್ಲಿ ನಾವು ಕಂಡುಕೊಳ್ಳಬಹುದಾಗಿದೆ.

## ಅಧ್ಯಾಯ ೭

# ಜೈನಪುರಾಣಗಳಲ್ಲಿಯ ಆದರ್ಶ, ದರ್ಶನ ಹಾಗೂ ಸಂದೇಶ

### (೧) ಜೈನಪುರಾಣಗಳಲ್ಲಿ ವಿಶ್ವಶಾಂತಿಯ ಆದರ್ಶ

ಶಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ
ಸಏವ ಸರ್ವಶಾಸ್ತ್ರಜ್ಞಃ ಯಸ್ಯ ಶಾಂತಂ ಮನಸ್ಸದಾ

ಜೈನಪುರಾಣಗಳು ಕಾವ್ಯಚ್ಛಲದಿಂದ ಧರ್ಮವನ್ನು ಉಪದೇಶಗೈಯುತ್ತಿರುವ ಸಾಧನಗಳಾಗಿರುವವು ಎಂಬುದನ್ನು ನಾವು ತಿಳಿದುಕೊಂಡೆವು. ಅವುಗಳ ಪ್ರಧಾನ ರಸವು ಶಾಂತರಸವೆಂಬುದನ್ನೂ ಅರಿತುಕೊಂಡಂತಾಯಿತು. "ನಿನಗೆ ರಸವೊಂದೆ ಶಾಂತಮೆ" ಎಂಬುದರಿಂದ ಅವು ಗುರಿಯೆಂದು ಇಟ್ಟುಕೊಂಡಿರುವ ಉಚ್ಚತಮವಾದ ಸಾಧ್ಯವು ಶಾಂತರಸವೊಂದೇ ಎಂದು ಇದರಿಂದ ಧ್ವನಿತವಾಗುವುದು. ಅದನ್ನು ಪರಿಪೂರ್ಣವಾಗಿ ಪಡೆದಿರುವವರು ತೀರ್ಥಂಕರರು. ಅವರ ಆದರ್ಶದಲ್ಲಿ ಅಡಕವಾಗಿರುವ ಗರ್ಭಿತಾರ್ಥವೇನೆಂಬುದನ್ನು ನಾವು ಪರ್ಯಾಲೋಚಿಸಬೇಕಾಗಿದೆ.

ಜಗತ್ತು ರಾಗ–ದ್ವೇಷಾದಿ ವಿಷಯ ವಿಲೀನತೆಯಿಂದ ಸ್ವಾರ್ಥಪೂರಿತವಾದ ಮನೋವೃತ್ತಿಯಿಂದ ತುಂಬಿದುದು; ನಿರ್ವಿಷಯಿಗಳಾದ ತೀರ್ಥಂಕರರ ಶ್ರೇಷ್ಠವಾದ ಚರಿತ್ರೆಗಳಲ್ಲಿ ನವಭಾವರಸಗಳನ್ನು ಕೂಲಂಕಷವಾಗಿ ತೋರಿಸಿ, ಅವುಗಳ ಅಭಿರುಚಿಯಲ್ಲಿ ಒಂದು ಸದ್ರುಚಿಯನ್ನು ಹುಟ್ಟಿಸುವ ಕವಿತಾ ಪ್ರಸಾದವನ್ನು ಎಷ್ಟೋ ಪುರಾಣಕವಿಗಳು ಕಾವ್ಯಾರಂಭದಲ್ಲಿ ತಮ್ಮ ಹಿರಿಯರಾದ ಕವಿಗಳಿಂದ ಕೋರಿರುವುದನ್ನು ನಾವು ಗಮನಿಸಬೇಕು.[೧] ಇದರ ಮೇಲಿಂದ ಒಂದು ಮಾತು ಸ್ಪಷ್ಟವಾಗುವುದು. ಏನೆಂದರೆ : ಪುರಾಣಕಾವ್ಯಗಳ ಧ್ಯೇಯವು ಕಾಮ–ಕ್ರೋಧ-ಲೋಭ-ಮೋಹಾದಿಗಳಿಗೆ ಪ್ರೇರಣೆಯನ್ನಿತ್ತು ಜಗತ್ತಿನಲ್ಲಿ ಸ್ವಾರ್ಥಲೋಲುಪತೆಯ ದುಷ್ಟವೂ ಹೀನವೂ ಆದ ಅಭಿರುಚಿಯನ್ನು ಹುಟ್ಟಿಸುವುದಲ್ಲ. ತದ್ವಿರುದ್ಧವಾಗಿ, ಅವೆಲ್ಲವುಗಳನ್ನೂ ಶಮನಗೊಳಿಸಿ ಸ್ವಾರ್ಥರಹಿತರನ್ನಾಗಿ ಮಾಡುವ

---

೧ ಎರಡನೆಯ ಗುಣವರ್ಮಕವಿಯ "ಪುಷ್ಪದಂತ ಪುರಾಣ" ದ ಪ್ರಥಮಾಶ್ವಾಸ, ಪದ್ಯ ೩೪ ನೋಡಿ :

ವಿಷಯವಿಲೀನಮಾನಸದ ಮಾನಸರಂ ತಿಳಿಪಲ್ಕೆ ಮಾಡಿ, ನಿ ।
ರ್ವಿಷಯಿಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಂ ತಟಂ ।
ಕಷಮೆನೆ ತೋಱಿ, ತದ್ರುಚಿಯ ಮೆಯ್ಯೊಳೆ ಸದ್ರುಚಿಯಂ
ತೊಡರ್ಚುವೀ।
ಮಿಷದ ಕವೀಂದ್ರರೀಗೆ ಸುಖಸೃಷ್ಟಿರತರ್ ಕವಿತಾಪ್ರಸಾದಮಂ ॥

ಹಾಗೂ ಸರ್ವಭೂತಹಿತದಲ್ಲಿ ಆನಂದವನ್ನು ಪಡೆಯುವ ಒಂದು ಹಿರಿಯದಾದ ಸದ್ರುಚಿಯನ್ನು ನಿರ್ಮಿಸುವುದೇ ಅವುಗಳ ಅಂತಿಮ ಧ್ಯೇಯವಾಗಿದೆ ಎಂಬುದು. ಅಂಥ ಸದ್ರುಚಿಯು ಉಂಟುಮಾಡುವ ಸುಖಸೃಷ್ಟಿಯನ್ನು ನಿರ್ಮಿಸುವುದೇ ಪುರಾಣ ಕವಿಗಳ ಕಾವ್ಯೋದ್ದೇಶವಾಗಿದೆ. ಶಾಂತರಸದ ಇಂಗಿತವಾದರೂ ಅದೇ ಇರುವುದು.

ದುಃಖ-ದುಮ್ಮಾನಗಳಿಂದ ಮನಸ್ಸು ತುಂಬಿಕೊಂಡಿರುವಾಗ ಅಥವಾ ಲೋಕ ವ್ಯವಹಾರದಲ್ಲಿ ತೊಡಗಿ ದಾರಿ ತಪ್ಪಿ ಅದು ಅಸ್ಥಿರವಾದಾಗ, ಪವಿತ್ರ ಭಾವನೆಯಿಂದ ನಾವು ಒಬ್ಬ ಸದ್ಗುರುವಿನೆಡೆಗೆ ಹೋಗುವೆವೆಂದು ತಿಳಿಯುವಾ. ಗುರುವಿನ ಪ್ರಶಾಂತವೂ ಗಂಭೀರವೂ ಆದ ಮುಖಮುದ್ರೆಯು ನಮ್ಮ ಮನಸ್ಸಿಗೆ ಶಾಂತತೆಯನ್ನು ಕೊಡುವುದು. ಅವರ ಅನುಭವಪೂರ್ಣವಾದ ಮಾತಿನಿಂದ ನಮಗೆ ಅಭಯವುಂಟಾಗುವುದು. ಅವರ ಆಶೀರ್ವಾದದಿಂದ ನಮ್ಮಲ್ಲಿ ಅಪೂರ್ವವಾದ ಶಕ್ತಿಯು ಮೂಡಿಬರುವುದು. "ಲೋಕಸ್ಸಮಸ್ತಾ ಸುಖಿನೋ ಭವಂತು" ಎಂಬ ಪ್ರೇರಣೆಯು ನಮ್ಮ ಅಂತಃಕರಣವನ್ನೆಲ್ಲ ವ್ಯಾಪಿಸುವುದು. ಜೈನಪುರಾಣಗಳು ನಿರ್ಮಿಸಿ ಬೆಳಗುವ ಸದ್ರುಚಿಯ ವ್ಯಾಪಕಾರ್ಥವು ಇಂಥದೇ ಆಗಿರುವುದೆಂಬುದನ್ನು ಮರೆಯಲಾಗದು.

ಧರ್ಮಸಂಸ್ಥಾಪಕರೇ ಆಗಲಿ, ಅಥವಾ ರಾಜನೀತಿಜ್ಞರೇ ಆಗಲಿ, ಲೋಕ-ಕಲ್ಯಾಣವೇ ತಮ್ಮ ಅತ್ಯುಚ್ಚ ಧ್ಯೇಯವೆಂಬುದಾಗಿ ನಿರ್ಧರಿಸುವರು. ಕಲ್ಯಾಣವನ್ನು ಸಾಧಿಸಬೇಕಾದರೆ

ಶಾಂತಿಯು ಅವಶ್ಯವಾದಿ ಬೇಕು. ವಿಶ್ವಶಾಂತಿಯ ಪರಿಪೂರ್ಣತೆಗೆ ವ್ಯಕ್ತಿವ್ಯಕ್ತಿಯ ಅಂತರಂಗದಲ್ಲಿಯೂ ಶಾಂತಿಯು ನೆಲೆಗೊಳ್ಳುವುದೇ ತಳಹದಿಯಾಗಿರುವುದು. ಒಬ್ಬ ವ್ಯಕ್ತಿಯಲ್ಲಿಯಾದರೂ ಅಶಾಂತತೆಯು ತಲೆದೋರಿದರೆ, ಆ ವಿಶ್ವಶಾಂತಿಗೆ ಭಂಗವಾದಂತೆಯೇ ಸರಿ. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಸ್ವಭಾವಜನ್ಯವಾದ ರತಿ – ಲೋಭ – ಮೋಹಾದಿ ಸ್ಥಾಯೀಭಾವಗಳನ್ನು ಉದಾತ್ತೀಕರಿಸಿ ವಿಶ್ವಕಲ್ಯಾಣಕ್ಕೆ ಅನುಗುಣವಾದ ಸನ್ಮಾರ್ಗಾಚರಣೆಯನ್ನು ಅನುಸರಿಸಬೇಕಾಗುವುದು. ಕೇವಲ ರಸಿಕನಾಗುವುದರಿಂದ ಇದು ಸಾಧ್ಯವಾಗಲಾರದು. ನಿಜವಾಗಿ ನೋಡಿದರೆ, ಪ್ರತಿಯೊಬ್ಬನೂ ತನ್ನ ಸ್ವಭಾವವನ್ನು ಸಾಧುವಿನಂತೆ ಉದಾತ್ತ (Sublimation) ಗೊಳಿಸಬೇಕಾಗುವುದು. ಅಂದರೆಯೆ, ಸಚ್ಚಾರಿತ್ರ್ಯದ ಜೀವನ (democratic living) ಎಂಬುದು ಜಗತ್ತಿನಲ್ಲಿ ಸಾಧ್ಯವಾಗುವುದು. ಅಂತಹ ಸಾಧುಸ್ವಭಾವದವನಿಗೆ ನ್ಯಾಯ (Justice) ಎಂಬುದು ಯಾವುದೆಂಬುದರ ಸರಿಯಾದ ಅರಿವು ಉಂಟಾಗುವುದು. "ನ್ಯಾಯೋಚಿತವಿಲ್ಲದ ರಾಜ್ಯಸಂಪದ"ವನ್ನು ಜೈನಪುರಾಣಗಳಲ್ಲಿಯೂ ಕೂಡ ಕಡೆಗಣಿಸಿದ್ದುದುಂಟು.[೧] ನ್ಯಾಯೋಚಿತವಾದ ಸಾಧುಪದವು ಜಗತ್ತಿನೊಳಗಿನ ಎಲ್ಲರಿಗೂ ಪ್ರಾಪ್ತವಾಗಲಿ ಎಂದು ಜೈನಪುರಾಣಗಳು ಮುಕ್ತಕಂಠವಾಗಿ ನುತಿಸುತ್ತಿರುವುದನ್ನು ಅಭಿನವ ಪಂಪನ ಕೆಳಗಿನ ಪದ್ಯದಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು :

---

೧ : ನೋಡಿ: ಪುಷ್ಪದಂತಪುರಾಣ, ತೃತೀಯಾಶ್ವಾಸಂ' ಪದ್ಯ ೧೦೨.

ತಪಮಂ ಶೀಲಮುಮಪ್ಪುಕೆಯ್ದು, ಕರಣಗ್ರಾಮಂಗಳಂ ಗೆಲ್ದು, ಚಿತ್ತದಿದ್ಯೈಕಾತಿಥಿ ಮಾಡಿ, ಶಾಂತರಸಮುಂ ಕಾರುಣ್ಯಮುಂ ತಾಳ್ದಿ, ತತ್ತ್ವ ಪರಿಜ್ಞಾನಮುಮಪ್ರಮತ್ತ ಚರಿತ ಪ್ರಸ್ಥಾನಮುಂ ಸಾರ್ದ ಸಾಧ. ಪದಂಗಳ್ ನಮಗೀಗೆ ಸಾಧುಪದಮುಂ ಕೈವಲ್ಯ ಮಾಂಗಲ್ಯಮುಂ ||

ಶಾಂತರಸವೇ ಸಾಧುತ್ವದ ಅಧಿಷ್ಠಾನವಾಗಿರುವುದು. ಜೀವನದಲ್ಲಿ ವಿಶಾಲವೂ ಉದಾತ್ತವೂ ಆದ ಹೊಸದೊಂದು ಭಾವವು ಆದರಿಂದ ಒಡಮೂಡುವುದು. ಈ ಹೊಸಭಾವದಲ್ಲಿ ಲೋಕದೊಳಗಿನ ಯಾವತ್ತೂ ಜೀವಿಗಳ ಕಡೆಗೆ ನೋಡುವ ಹೊಸ ದೃಷ್ಟಿಯು ವಿಕಾಸಗೊಳ್ಳುವುದು. ಆ ದೃಷ್ಟಿಯಲ್ಲಿ ಗೋಚರವಾಗುವ ನಾಲ್ಕು ಬಗೆಯ ಭಾವದೀಪ್ತಿಯನ್ನು ಪೂರ್ವಾಚಾರ್ಯರು ಹೀಗೆ ವಿವರಿಸಿರುವರು :

ಸತ್ತ್ವೇಷು ಮೈತ್ರೀ, ಗುಣೇಷು ಪ್ರಮೋದಂ
ಕ್ಲಿಷ್ಟೇಷು ಜೀವೇಷು ದಯಾಪರತ್ವಂ
ಮಧ್ಯಸ್ಥ ಭಾವಂ ವಿಪರೀತವೃತ್ತೌ
ಸದಾ ಮಮಾತ್ಮಾ ವಿದಧಾತು ದೇವ॥

ಹೀಗೆ ಜೀವಮೈತ್ರಿ, ಗುಣಾನುರಾಗ, ದಯಾಪರತ್ವ ಹಾಗೂ ಮಧ್ಯಸ್ಥಭಾವ ( unpurturbed state ) ಇವೇ ಸಾಧುವೃತ್ತಿಯ ದ್ಯೋತಕಗಳಾಗಿರುವುವು. ಶಾಂತರಸವನ್ನು ಆದರ್ಶವನ್ನಾಗಿ ಇಟ್ಟುಕೊಂಡು ಪ್ರತಿಯೊಬ್ಬ ವ್ಯಕ್ತಿಯೂ ಇವುಗಳನ್ನೇ ಪಡೆಯಬೇಕೆಂದು ಜೈನಪುರಾಣಗಳು ಆಶಿಸುತ್ತಿರುವುವು. ಪ್ರತಿಯೊಬ್ಬ ವ್ಯಕ್ತಿಯೂ, ತನ್ಮೂಲಕ ಪ್ರತಿಯೊಂದು ರಾಷ್ಟ್ರವೂ,

ಸಾಧುತ್ವವನ್ನೇ ಸಾಧಿಸಿದ್ದುದಾದರೆ, ವಿಶ್ವಶಾಂತಿಯೇ ಅವುಗಳ ಆದರ್ಶವಾಗಿರುವುದೆಂದರೆ ತಪ್ಪಾಗಲಾರದಷ್ಟೇ ? ಶಾಂತರಸ ಪ್ರಧಾನವಾದ ಸಾಹಿತ್ಯವೇ ಈ ಮಹತ್ಕಾರ್ಯವನ್ನು ಸಾಧಿಸ ಬೇಕಾಗಿರುವುದು. ಜಗತ್ತಿನೊಳಗಿನ ಸಾಹಿತಿಗಳೆಲ್ಲರೂ ಈ ಮಾತಿನ ಸತ್ಯತೆಯನ್ನು ಕುರಿತು ಹೆಚ್ಚಾಗಿ ಮನನ ಮಾಡುವುದು ಆವಶ್ಯಕವಿರುವುದೆಂಬುದನ್ನು ಮರೆಯಲಾಗದು. ಇಂಥ ಸಾಹಿತ್ಯವು ನಿರ್ಮಿಸಬಹುದಾದ ಸದ್ರುಚಿಯು ಹೆಚ್ಚು ಹೆಚ್ಚು ಬೆಳೆಯುತ್ತ ಹೋದರೆ ಮಾತ್ರ ಸನ್ಮಾರ್ಗ ಪ್ರವರ್ತನವು ಸಾಧ್ಯ ವಾಗುವುದಲ್ಲದೆ ವಿಶ್ವಶಾಂತಿಗೆ ಅದು ನಾಂದಿಯಾಗುವುದು. ಅಂದರೆಯೆ, "ಮನುಷ್ಯಜಾತಿ ಒಂದೆ ವಲಂ" ಎಂಬ ಜೈನ ಪುರಾಣಗಳ ಮಹಾನ್ ಆದರ್ಶವು ಸಾಧ್ಯವಾಗಬಹುದು ಎಂಬು ದರಲ್ಲಿ ಸಂದೇಹವಿಲ್ಲ.

## ೨. ಜಿನೇಂದ್ರ ದರ್ಶನ

ಭಾರತೀಯ ದರ್ಶನಗಳಲ್ಲಿ ಬೌದ್ಧ ಹಾಗೂ ಜೈನ ದರ್ಶನಗಳು ಅವೈದಿಕಗಳೆಂದು ಪರಿಗಣಿಸುವುದು ವಾಡಿಕೆ ಯಾಗಿದೆ. ಆದಾಗ್ಯೂ ಭಾರತದ ತಾತ್ವಿಕ ವಿಚಾರ ಪ್ರವಾಹ ದಲ್ಲಿ ಅವು ಮಹತ್ವದ ಪಾತ್ರವನ್ನು ವಹಿಸಿರುವವೆಂದೂ, ಆ ಪ್ರವಾಹದ ಪಾತ್ರವನ್ನೇ ಬದಲಿಸುವಷ್ಟು ಪ್ರಭಾವಯುಕ್ತ ವಾಗಿದ್ದುವೆಂದೂ, ಅವು ಮನ್ನಣೆಯನ್ನು ಪಡೆದಿರುವುವು. ಅಂತೆಯೇ ಶ್ರೀಮತ್ ಶಂಕರಾಚಾರ್ಯರ ಅದ್ವೈತವು ಪ್ರಚ್ಛನ್ನ

ಬೌದ್ಧ ಮತವೆಂಬಂತೆ, ಶ್ರೀ ಮಧ್ವಾಚಾರ್ಯರ ದ್ವೈತವೂ ಪ್ರಚ್ಛನ್ನ ಜೈನಮತವೆನ್ನಬಹುದು ಎಂಬ ಅಭಿಪ್ರಾಯವೂ ಉಂಟು.[೧] ಅಲ್ಲದೆ, "ಜೈನರು ಒಂದು ಅರ್ಥದಲ್ಲಿ ಶಿವೋಪಾಸಕರು. ವೀರಶೈವರಿಗಿಂತ ಮೊದಲು ಶಿವದ ಮಹಿಮೆಯನ್ನು ಎತ್ತಿ ಹಾಡಿದವರು ಜೈನರು. ಆದರೆ ಅವರ ಶಿವಪದ ಲೋಕೋತ್ತರ ಮುಕ್ತಿ ಮಹಿಮೆ. ಶಿವ-ಶಕ್ತಿ ಸಾಮರಸ್ಯದ ಪೌರುಷದ ಲೀಲೆ. ಶೂನ್ಯಸಂಪಾದನೆಯ ಸಿದ್ಧತೆ ಇನ್ನೂ ತೆರೆ ಮರೆಯಲ್ಲಿಯೋ ರಂಗನೇಪಥ್ಯದ ವಿಧಾನದಲ್ಲಿಯೋ ತೊಡಗಿತ್ತು ಎಂದು ತೋರುತ್ತದೆ"[೨] ಎಂಬ ವಿಚಾರವೂ ಗಮನಾರ್ಹವಾಗಿರುವುದು.

"ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ"- ಎಂಬುದು ವೈದಿಕಧರ್ಮದ ಆದರ್ಶವು. ಅದಕ್ಕಾಗಿ "ಕೃಣ್ವಂತೋ ವಿಶ್ವಮಾರ್ಯಮ್" ಎಂಬ ಸಂದೇಶವನ್ನು ಋಗ್ವೇದವು ಇತ್ತಿದೆ. "ಆರ್ಯತ್ವ"ವೆಂದರೆ ಸಂಸ್ಕಾರಯುಕ್ತರನ್ನಾಗಿ ಮಾಡುವುದು. ವೈದಿಕಧರ್ಮದಲ್ಲಿ ವಿಧಿಸಿದ ಷೋಡಶ

---

೧. ಪ್ರೊ. ದ. ರಾ. ಬೇಂದ್ರೆ : ಸೊಲ್ಲಾಪುರದ ಪಂ. ವರ್ಧಮಾನ ಶಾಸ್ತ್ರಿಯವರು ಸಂಪಾದಿಸಿದ ಉಮಾಸ್ವಾತಿಯ "ತತ್ತ್ವಾರ್ಥ ಸೂತ್ರ"ದ ಮುನ್ನುಡಿಯಲ್ಲಿ; ಪುಟ ೩.

೨. ಅವರೇ: ಶ್ರೀ ಸದಾನಂದ ನಾಯಕರ: "ಸಾಹಿತ್ಯಸಂಶೋಧನೆ ಮತ್ತು ಸಮಾಲೋಚನೆ" ಎಂಬ ಗ್ರಂಥದಲ್ಲಿ ಬರೆದ ಜತೆನುಡಿಯಲ್ಲಿ; ಪುಟ ೫.

ಸಂಸ್ಕಾರಗಳಲ್ಲಿ ವಿದ್ಯಾರಂಭ ಸಂಸ್ಕಾರವೇ ಮಹತ್ವವಾದುದೆಂದು ತೋರುವುದು. ಯಾಕೆಂದರೆ ವಿದ್ಯೆಯಿಂದಲೇ ದೇವತೆಗಳು ಅಮೃತವನ್ನು ಪಡೆದರೆಂದು ವೇದಗಳು ಸಾರುವುವು. ಅವಿದ್ಯೆಯು ಅದನ್ನು ಸಾಧಿಸಲಾರದು. ನಿಜವಾದ ವಿದ್ಯೆಯೆಂದರೆ ಆತ್ಮವಿದ್ಯೆಯೇ. ಆದುದರಿಂದ ಆತ್ಮವಿದ್ಯೆಯನ್ನು ಜಗತ್ತಿನಲ್ಲೆಲ್ಲ ಪ್ರಸಾರಗೊಳಿಸಿ, ಎಲ್ಲರಲ್ಲಿಯೂ ಆರ್ಯತ್ವವು ನೆಲೆಗೊಳ್ಳುವಂತೆ ಮಾಡಿರಿ ಎಂಬುದು ವೇದದ ಸಂದೇಶವಾಗಿರುವುದು. ಈ ಸಂದೇಶವನ್ನು ಪುನರುಜ್ಜೀವನಗೊಳಿಸಿದವರು ಸ್ವಾಮಿ ದಯಾನಂದ ಸರಸ್ವತಿಯವರು. ಅದನ್ನು ಸಮರ್ಥಿಸಿ ಆಧುನಿಕ ಮಹರ್ಷಿಗಳಾದ ಶ್ರೀ ಅರವಿಂದರು ಆರ್ಯತ್ವವನ್ನು ಕುರಿತು ವಿಸ್ತೃತವಾದ ವ್ಯಾಖ್ಯೆಯನ್ನು ಬರೆದಿರುವರು.

ಪ್ರಾಚೀನ ಋಷಿಗಳು ಈ ಆದರ್ಶ ಸಾಧನೆಯಲ್ಲಿ ತೊಡಗಿದ್ದರು. ಆದರೆ ಕಾಲಕ್ರಮದಲ್ಲಿ ಅವರ ಅನುಯಾಯಿಗಳ ಸಾಧನೆಯಲ್ಲಿಯೂ ಅದಕ್ಕಾಗಿ ಅವರು ಅನುಸರಿಸಿದ ಆಚರಣೆಯಲ್ಲಿಯೂ ಬದಲಾವಣೆಗಳು ಆಗುತ್ತ ಹೋದವು. ಯಜ್ಞಯಾಗಾದಿಗಳು ಹೆಚ್ಚಿ, ಹಿಂಸೆಯು ಬೆಳೆಯಿತು. ಆತ್ಮವಿದ್ಯೆಯ ಸಾಧನೆಗಾಗಿ ಬೇರೆ ಪ್ರಾಣಿಗಳ ಬಲಿದಾನ ಮಾಡುವುದು ರೂಢಿಯಾಯಿತು. ಈ ರೂಢಿಯನ್ನು ಪ್ರತಿಭಟಿಸುವ ಕಾರ್ಯವನ್ನು ಬುದ್ಧನು ಕೈಕೊಂಡನು. ಅಹಿಂಸೆಯಿಂದಲೇ "ಆತ್ಮದೀಪ"ವನ್ನು ಬೆಳಗಿ ಬುದ್ಧನಾಗುವುದು ಸಾಧ್ಯವಿರುವುದೆಂದು ಆತನು ಸಾರಿದನು. ಆರ್ಯತ್ವವನ್ನು ಸಾಧಿಸ ಹೊರಟು ಅರ್ಹಂತನಾದನು. ಅರ್ಹಂತನು ಸಕಲ ಪ್ರಾಣಿಮಾತ್ರಗಳಲ್ಲಿ

ಸಹಾನುಭೂತಿಯನ್ನು ತಳೆದು, ಅವರಲ್ಲಿ ಆರ್ಯಸತ್ಯಗಳ[೧] ಅರಿವು ಉಂಟಾಗುವಂತೆ ಮಾಡಿ ಅವರ ದುಃಖಪರಿಹಾರಕ್ಕೆ ಸಹಾಯಕನಾಗುವನೆಂದು ಬೌದ್ಧಗ್ರಂಥಗಳು ಹೇಳುವವು. ಆರ್ಯತ್ವದ ಪರಿಪೂರ್ಣತೆಯೇ ಅರ್ಹಂತತೆ (An Aryan perfected is an Arhat) ಎಂದು ಶ್ರೀ ಅರವಿಂದರು ಹೇಳಿರುವದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕಾಗಿದೆ.

ಗೌತಮನು ಪರಿವ್ರಾಜಕನಾಗಿ ಮನೆಯಿಂದ ಹೊರಡುವ ಪೂರ್ವದಲ್ಲಿ ಅವನ ಮನಸ್ಸಿನ ಮೇಲೆ ಆಳವಾದ ಪ್ರಭಾವ-ವನ್ನುಂಟು ಮಾಡಿದ ನಾಲ್ಕು ದೃಶ್ಯಗಳಲ್ಲಿ ಕೊನೆಯ ದೃಶ್ಯವು ಒಬ್ಬ ಶ್ರಮಣನದಾಗಿತ್ತೆಂಬುದನ್ನು ಮರೆಯಲಾಗದು. ಶ್ರಮಣನಂತೆ ವೈರಾಗ್ಯವನ್ನು ತಳೆದು ಅವನು ಸಂಸಾರವನ್ನು ತ್ಯಜಿಸಿದನು. ಶಾಂತಿಯನ್ನು ಶೋಧಿಸಲು ಹೊರಟು ಸ್ವಯಂಬುದ್ಧನಾದನು, ಜ್ಞಾನಿಯಾದನು, ಅರ್ಹತ್ವವನ್ನು ಪಡೆದನು.

ತೀರ್ಥಂಕರರೂ ಅರುಹಂತರೂ. ಸಮ್ಯಗ್‌ಜ್ಞಾನವಲ್ಲದೆ, ಸಮ್ಯಗ್‌ದರ್ಶನವನ್ನೂ ಸಮ್ಯಕ್‌ಚಾರಿತ್ರ್ಯವನ್ನೂ ಪಡೆದಿರು-

---

೧ ಆರ್ಯಸತ್ಯಗಳು: ದುಃಖ, ಸಮುದಯ, ಮಾರ್ಗ ಹಾಗು ನಿರೋಧ ಎಂದು ನಾಲ್ಕು ವಿಧವಾಗಿವೆ. ಇವುಗಳಿಗೆ ಪ್ರಮೇಯಗಳೆನ್ನುವರು. ಅವುಗಳ ವಿಷಯವಾಗಿ ಇರುವ ಕರ್ತವ್ಯಭಾವನೆಗಳಿಗೆ ಆರ್ಯಸತ್ಯ ಚತುಷ್ಟಯವೆಂದು ಹೇಳುತ್ತಾರೆ. ಅವು ಹೀಗೆ ಇರುವುವು: ಸರ್ವಂ ಸ್ವಲಕ್ಷಣಂ ಸ್ವಲಕ್ಷಣಂ, ಕ್ಷಣಿಕಂ ಕ್ಷಣಿಕಂ, ದುಃಖಂ ದುಃಖಂ, ಮತ್ತು ಶೂನ್ಯಂ ಶೂನ್ಯಂ.

ವವರು. ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಹಾಗು ಅನಂತ ಸೌಖ್ಯಗಳಿಂದ ಲೋಕ ಕಲ್ಯಾಣದಲ್ಲಿ ತೊಡಗಿದವರು. ಆದಿ ತೀರ್ಥಂಕರನನ್ನು ಪಂಪನು, "ಆದಿಬ್ರಹ್ಮಂ ಅಗಾಧ ಬೋಧನಿಳಯಂ" ಎಂದು ಸ್ತುತಿಸಿರುವನು. ಆತ್ಮ ವಿಕಸನದಿಂದ ತಾವೇ ಬ್ರಹ್ಮತ್ವವನ್ನು ಪಡೆದಿರುವವರು ತೀರ್ಥಂಕರರೆಂದು ಇದರ ಅರ್ಥವು. ಅವರು "ದುರ್ವಾರ ಸಂಸಾರ ವಿಚ್ಛೇದನಾರ್ಥ"ವಾಗಿ ತೀರ್ಥ (ಹಡಗ) ವನ್ನು ರಚಿಸಿ, ಪ್ರಾಣಿಮಾತ್ರಗಳಿಗೆ ಮುಕ್ತಿಯನ್ನು ದಯಪಾಲಿಸುವಂಥವರಾಗಿರುವರೆಂದೂ ಪಂಪನು ಅವರನ್ನು ಪ್ರಾರ್ಥಿಸಿರುವನು.

ತೀರ್ಥಂಕರರಷ್ಟೇ ಈ ಲೋಕಕಲ್ಯಾಣದ ಕಾರ್ಯದಲ್ಲಿ ತೊಡಗಿರುವರೆಂದಲ್ಲ. ಅಸಂಖ್ಯಾತರಾದ ಅವರ ಅನುಯಾಯಿಗಳೆಲ್ಲರೂ ಅವರ ಪ್ರೇರಣೆಯಿಂದ ತಮ್ಮ ತಮ್ಮ ಶಕ್ತಿಗೆ ಅನುಸಾರವಾಗಿ ಈ ಕಾರ್ಯವನ್ನು ಮಾಡುತ್ತಲಿರುವರು; ಅವರಲ್ಲಿ ಪಂಚಪರಮೇಷ್ಠಿಗಳು ಪ್ರಮುಖರು. ಬೌದ್ಧರ ಶರಣಾಗಮನತ್ರಯ (ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ ಸಂಘಂ ಶರಣಂ ಗಚ್ಛಾಮಿ)ದಂತೆ ಜೈನರ ಪಂಚನಮಸ್ಕಾರಗಳೂ ಇವರ ವಿಷಯವಾಗಿ ಪ್ರಸಿದ್ಧವಾಗಿರುವುವು. "ನಮೋ ಅರ್ಹಂತಾಯ, ನಮೋ ಸಿದ್ಧಾಯ, ನಮೋ ಆಚಾರ್ಯಾಯ ನಮೋ ಉಪಾಧ್ಯಾಯಾಯ, ನಮೋ ಸರ್ವಸಾಧೂಣಾವರ್" ಹೀಗೆ ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಹಾಗು ಸರ್ವಸಾಧುಗಳು ಲೋಕಸಂಗಹದ ಕಾರ್ಯದಲ್ಲಿ ತೊಡಗಿದವರಾದುದರಿಂದ,

ನಮ್ಮನ್ನು ಅವರು ಉದ್ಧರಿಸಲಿ ಎಂದು ಆದಿಪುರಾಣದ ಪ್ರಾರಂಭದಲ್ಲಿ ಪಂಪನು ಸ್ತುತಿಸಿರುವುದನ್ನು ಕೆಳಗಿನ ಪದ್ಯದಲ್ಲಿ ಕಾಣಬಹುದು :

ಕಾರ್ಯಂ ಎಮಗೆ ಇದುವೆ, ಶಿವಪದ
ಪರ್ಯಂತಂಬರಂ ಅಮೋಘಂ ಉದ್ಧರಿಸುಗೆ ತಾ-
ತ್ಪರ್ಯದಿಂ, ಅರ್ಹತ್ - ಸಿದ್ಧ-ಆ
ಚಾರ್ಯ- ಉಪಾಧ್ಯಾಯ- ಸರ್ವಸಾಧುಗಳ್ ಎಮ್ಮಂ

ಇಂಥವರ ಚರಿತ್ರೆಯು ಮಂಗಲಕರವು. ತೀರ್ಥಂಕರರ ಉದಾತ್ತ ಚಿತ್ರಗಳನ್ನೇ ಜೈನಪುರಾಣಗಳು ನಮ್ಮ ಮುಂದೆ ಇಟ್ಟಿರುವುವು ಜಿನಾಲಯಗಳಲ್ಲಿರುವ ಉಜ್ವಲವಾದ ಜಿನ ಬಿಂಬಗಳೂ ಅತ್ಯುನ್ನತವಾದ ಗೋಮಟೇಶ್ವರನ ಪ್ರತಿಮೆಗಳೂ ಧಾರ್ಮಿಕರ ಮೇಲೆ ಉಂಟುಮಾಡುತ್ತಿರುವ ಪ್ರಭಾವವನ್ನೇ ಜೈನಪುರಾಣಗಳು ಸಾಹಿತ್ಯಪ್ರೇಮಿಗಳೆಲ್ಲರ ಮೇಲೆ ಉಂಟು ಮಾಡಲು ಪ್ರಯತ್ನಿಸುತ್ತಿರುವುವು ಭಾರತದಲ್ಲಿ ಕಲೆಯು ಧರ್ಮದ ಪ್ರಭಾವವನ್ನು ಉಜ್ವಲಗೊಳಿಸುವ ಸಾಧನವಾಗಿರುವ ದೆಂಬ ಅಭಿಪ್ರಾಯವನ್ನು ಒಪ್ಪಿಕೊಂಡರೆ, ಕಾವ್ಯವೂ ಒಂದು ಕಲೆಯಾಗಿರುವುದರಿಂದ ಅದೂ ತನ್ನ ಕಾರ್ಯವನ್ನು ಸಮರ್ಪಕ ವಾಗಿಯೇ ಮಾಡಿರುವುದೆನ್ನಲು ಅಡ್ಡಿಯಿಲ್ಲ. ಮಹಾ ಯಾನ ಪಂಥದ ಗ್ರಂಥವಾದ " ಆರ್ಯಗಂಡವ್ಯೂಹ " ವು ಘೋಷಿಸಿರುವಂತೆ "ಜಿನೇಂದ್ರಸ್ಯ ದರ್ಶನಂ ಜ್ಞಾನ ವರ್ಧನಂ" ಎಂಬ ಸೂಳ್ನುಡಿಯಲ್ಲಿ ಸತ್ಯಾಂಶವಿರುವುದಾದರೆ ಜೈನಪುರಾಣಗಳೊಳಗಿನ ತೀರ್ಥಂಕರ ದರ್ಶನವೂ ಅದನ್ನೇ

ಸಾಧಿಸಲು ಸಮರ್ಥವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಜೈನಪುರಾಣಗಳಲ್ಲಿ ಚಿತ್ರಿತವಾದ ಈ ಮಹೋನ್ನತವಾದ ಆದರ್ಶವೂ, ವಿಶ್ವವ್ಯಾಪಕವಾದ ಅಮರ ಸಂದೇಶವೂ ತೀರ್ಥಂಕರರ ಸ್ತವನಗಳಲ್ಲೆಲ್ಲ ಕಂಡುಬರುವುದು. ಉದಾಹರಣೆಗಾಗಿ ಆದಿಪುರಾಣದೊಳಗಿನ ಜಿನಸ್ತುತಿಪರವಾದ ಕೆಳಗಿನ ಪದ್ಯವನ್ನು ನಾವು ಜ್ಞಾಪಿಸಿಕೊಳ್ಳಬಹುದು:

ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ
ಗುಣಸ್ತವಂ ಉದಾತ್ತವೃತ್ತ ಭವದೀಯ ವಸ್ತುಸ್ತವಂ।
ಗುಣಾಗುಣ ವಿವೇಕ ಮೂಕ ರತಿಮೂರ್ಖರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆವರಾದಿತೀರ್ಥಂಕರಾ ॥೧॥

ಸ್ಫುರಿತೋದ್ಯತ್ಕನಕ ಪ್ರಭಾಪ್ರಸರದಿಂ ಪೀತಾಂಬರಂ, ಪದ್ಮವಿ-
ಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ತಮೋ-
ಹರನಾಗಿರ್ದುದರಿಂ ಹರಂ, ಭವಹರಂ, ಮಾಣಿಕ್ಯದೇವಂ ವಸುಂ-
ಧರೆಗಿಂತೊರ್ಬನೆ ದೇವನಾಗಿರೆ ಜಯಂ ಭದ್ರಂ ಶುಭಂ ಮಂಗಳಂ ॥ ೨ ॥

ಭೂಪಾಲೇಂದ್ರಮಹಾಮಹೈರಹರಹಸ್ಸಂಪಾದ್ಯಮಾನೈರ್ನವೈಃ
ಭ್ರಾಜಂತೇ ಜಿನರಾಜ ಕೃತ್ರಿಮಗೃಹಾಸ್ತೇಭ್ಯೋ ನಮಸ್ಕುರ್ಮಹೇ।
ಅಸ್ಮಾಕಂ ಕವಿತಾಗುಣಾರ್ಣವನುತಾಃ ಕುರ್ವಂತು ಚೈತ್ಯಾಲಯಾಃ
ತೇ ಲೋಕತ್ರಯ ತುಂಗಮಂಗಳ ಮಹಾಶ್ರೀ ಭಾಗ್ಯಯೋಗಂ ಪದಂ ॥೩॥

## (೩) ಜೈನಪುರಾಣಗಳ ಸಂದೇಶ

ಜೈನಪುರಾಣಗಳ ಆದರ್ಶವನ್ನೂ, ಅವುಗಳೊಳಗಿನ ದರ್ಶನವನ್ನೂ ಎತ್ತಿ ತೋರಿಸಿದ ಮೇಲೆ ಮಾನವ ಜನಾಂಗಕ್ಕೆ ಅವುಗಳ ಸಂದೇಶವೇನೆಂಬುದನ್ನು ನಿರ್ದೇಶಿಸಿ, ಅವುಗಳ ಈ ರೂಪರೇಷೆಯನ್ನು ಸಮಾರೋಪಗೊಳಿಸಬಹುದು.

ಸಾಮಾನ್ಯವಾಗಿ ಭಾರತೀಯ ದರ್ಶನಗಳು ಇತರ ದರ್ಶನಗಳಿಗಿಂತ ಕೆಲವು ಅಂಶಗಳಲ್ಲಿ ಭಿನ್ನವಾಗಿರುವವೆಂಬುದನ್ನು ನಾವು ಗಮನದಲ್ಲಿ ಇಟ್ಟುಕೊಳ್ಳಬೇಕು. ಅಂಥವುಗಳಲ್ಲಿ ಕರ್ಮಬಂಧವು ಒಂದು; ಜನ್ಮಾಂತರವು ಎರಡನೆಯದು; ಮತ್ತು ಮೋಕ್ಷವು ಮೂರನೆಯದು. ಭೌತವಿಜ್ಞಾನದಿಂದ ಪ್ರಭಾವಿತವಾದ ಪಾಶ್ಚಾತ್ಯದರ್ಶನಗಳಿಗೆ ಇವುಗಳ ಸುಳಿವು ಹತ್ತದಾಗಿವೆ. ಅವರ ದೃಷ್ಟಿಯಲ್ಲಿ ಇವು ಮೂಢ ಭಾವನೆಗಳು (Superstitions), ಕಾಡುಸ್ಥಿತಿಯ (Primitive) ಕುರುಹುಗಳು, ಹಾಗು ಅಜ್ಜಿಯ ಕಥೆಯ ಹುಡುಗಾಟಿಕೆ (Childish) ಗಳು. ವಿಜ್ಞಾನವಾದದ ಬೆನ್ನುಹತ್ತಿದ ರಾಷ್ಟ್ರಗಳು ವಿನಾಶಕ್ಕೆ ಆಹ್ವಾನವನ್ನೀಯುತ್ತಿರುವುವು. ಭಾರತೀಯ ದರ್ಶನಗಳು ತಮ್ಮ ದೈವೀದರ್ಶನಗಳಿಂದ ಅವುಗಳನ್ನು ಇಂದು ಉದ್ಧರಿಸಬೇಕಾಗಿರುವುದು. ಮಾನವ ಜೀವನದಲ್ಲಿಯೇ ಒಂದು ಹೊಸ ದೃಷ್ಟಿಯನ್ನು ಸೃಷ್ಟಿಸಬೇಕಾಗಿರುವುದು.

ಜೀವನದಲ್ಲಿ ಇಟ್ಟುಕೊಳ್ಳಬೇಕಾದ ದೃಷ್ಟಿಯಲ್ಲಿ ಅಶುಭ, ಶುಭ; ಅಶಿವ (ದುರಿತ), ಶಿವ; ಪಾಪ, ಪುಣ್ಯ; ಪ್ರೇಯಸ್ಸು, ಶ್ರೇಯಸ್ಸು— ಇತ್ಯಾದಿಯಾಗಿ ನಿರ್ದಿಷ್ಟವಾದ ಎರಡು ವಿಭಾಗ

ಗಳನ್ನು ಕಲ್ಪಿಸುವುದು ಭಾರತೀಯ ದರ್ಶನಗಳಲ್ಲಿ ವಾಡಿಕೆ-ಯಾಗಿದೆ. ಇವುಗಳನ್ನೇ ಜೈನಪುರಾಣಗಳು ಹೇಯ ಮತ್ತು ಉಪಾದೇಯವೆಂದು ಮತ್ತೊಂದು ಬಗೆಯಾಗಿ ಹೇಳುವವು: "ಸಂಸಾರ ಕಾರಣಂಗಳ್ ಹೇಯಂಗಳ್; ಮುಕ್ತಿ ಕಾರಣಂಗಳ್ ಉಪಾದೇಯಂಗಳ್"; ಎಂದರೆ ಒಂದರಿಂದ ಸಂಸಾರ, ಮತ್ತೊಂದರಿಂದ ಮುಕ್ತಿ. ಮೊದಲನೆಯದು ಹೇಯ; ಮತ್ತಿನದು ಉಪಾದೇಯ. ನಿಮಗೆ ಬೇಕಾದುದು ಹೇಯವೋ, ಉಪಾದೇಯವೋ ಎಂಬುದು ಪ್ರಶ್ನೆ. ಭಾರತೀಯ ಇತರ ದರ್ಶನಗಳಂತೆ ಜೈನಪುರಾಣಗಳು ಎತ್ತಿ ಹಿಡಿದಿರುವುದು ಉಪಾದೇಯವನ್ನೇ.

ಹಾಗಾದರೆ ಇವುಗಳಿಗೆ ಕರ್ಮಪ್ರವಾಹವೇ (ಆಸ್ರವ) ಮೂಲ. ಅದು ಪಾಪಪೂರಿತವಾದರೆ ಒಂದು ಬಗೆಯ ಜನ್ಮಾಂತರ. ಪುಣ್ಯದಿಂದ ಕೂಡಿದರೆ ಮತ್ತೊಂದು ಬಗೆಯ ಜನ್ಮಾಂತರ ಪಾಪಕ್ಷಯದಿಂದಲೇ ಪುಣ್ಯದ ಉತ್ಕರ್ಷವಾಗುವುದು. ಪೂರ್ವಜನ್ಮದ ಪುಣ್ಯದಿಂದಲೇ ಜೀವನದಲ್ಲಿ ಭೋಗ-ಭಾಗ್ಯಗಳು ಲಭಿಸುವುವು. ಆದಿಪುರಾಣದಲ್ಲಿ ಸ್ವಯಂಬುದ್ಧನು ಈ ಮಾತನ್ನು ಮಹಾಬಳನಿಗೆ ಬಹು ಸುಂದರವಾಗಿ ನಿವೇದಿಸಿರುವುದನ್ನು ಕಾಣಬಹುದು:

ಲಾವಣ್ಯಾಬ್ಧಿತರಂಗಭಂಗ ಲಲಿತಭ್ರೂಭಂಗ ದಿವ್ಯಾಂಗನಾ

ಭಾವಾಪಾಂಗ ನಿರೀಕ್ಷಣಾ ಮೃತಕೃತಾನಂಗೋತ್ಸವಂ ಚೋದ್ಯ ವಿ
ದ್ಯಾವಷ್ಟಂಭ ವಿಜೃಂಭಿತಾಂಬರ ಚರೇಶಾರಾಧ್ಯನಾಗಿರ್ದ ನಿ
ನ್ನೀ ವಿದ್ಯಾಧರ ಲಕ್ಷ್ಮಿ ಪುಣ್ಯ ಜನಿತಂ ವಿದ್ಯಾಧರಾಧೀಶ್ವರಾ ॥

ಆದರೆ ಇಂಥ ಪುಣ್ಯದಿಂದ ಪಡೆದ ಭೋಗಭಾಗ್ಯವನ್ನು ಉಪಯೋಗಿಸಿಯಾದ ಮೇಲೆ ಪುಣ್ಯಸಂಚಯವು ತೀರಿದ ಮೇಲೆ, ಅವು ಯಾವವೂ ದೊರೆಯಲಾರವು. ಭೋಗಭೂಮಿಯಿಂದ ಉರುಳಿ, ಮತ್ತೆ ಮನುಷ್ಯನಾಗಿ ಉದ್ಭವಿಸಬೇಕಾಗುವುದು. ಆ ಉರುಳುವಿಕೆಯನ್ನು ತಪ್ಪಿಸಲು ಯಾರಿಗೂ ಸಾಧ್ಯವಿರುವುದಿಲ್ಲವೆಂಬುದನ್ನು :

ಸುರತರು ನಂದನಂಗಳಿರ, ರತ್ನ ಜಿನದ್ಧ ವಿಮಾನ ಕುಟ್ಟಿಮಾಂ
ತರಸುರತಾಲಯಂಗಳಿರ, ಚಾರು ವಿಲೋಲಕಟಾಕ್ಷಪಾತ ಸೌಂ
ದರ ಪರಿವಾರ ದೇವಿಯರಿರಾ, ಕಡುಕೆಯ್ದು ಕೃತಾಂತನಿಂತು ನಿ-
ರ್ನೆರವೆಟಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ?

ಎಂದು ಲಲಿತಾಂಗನು ಈಶಾನ್ಯ ಕಲ್ಪದಲ್ಲಿ ತನ್ನ ಆಯುರವಸಾನಕಾಲದಲ್ಲಿ ದೀನನಾಗಿ ತನ್ನ ಮುಂದಿರುವವರನ್ನೆಲ್ಲ ಪ್ರಾರ್ಥಿಸುತ್ತಿರುವಾಗ ಕಂಡುಕೊಳ್ಳಬಹುದು.

ಅಂತೆಯೇ, ಅಖಂಡಷಟ್ಖಂಡ ಪೃಥ್ವಿಯ ಪ್ರಥಮ ಚಕ್ರವರ್ತಿಯಾಗಿದ್ದ ಭರತನ ಬಾಯಿಯಿಂದ ಜೈನಪುರಾಣಗಳು ಹೇಳಿಸಿರುವ ಮಾತನ್ನು ಇಲ್ಲಿ ಗಮನಿಸಬೇಕು –

ಅಮರೇಂದ್ರೋನ್ನತಿ, ಖೇಚರೇಂದ್ರ ವಿಭವಂ,
ಭೋಗೀಂದ್ರ ಭೋಗಂ, ಮಹೇಂ
ದ್ರವಹೈಶ್ವರ್ಯಂ, ಇವೆಲ್ಲಂ ಅಧ್ರುವಂ

ಪ್ರಾಚೀನ ಶಿಲಾಶಾಸನಗಳಾದರೂ ಇದೇ ಮಾತನ್ನು ಸಾರಿ ಹೇಳಲಿಲ್ಲವೆ?

ಸುರಚಾಪಂಬೋಲೆ, ವಿದ್ಯುಲ್ಲತೆಗಳವೋಲ್,
ಮಂಜುವೋಲ್, ತೋಱಿ ಬೇಗಂ
ಪರಿಗುಂ ಶ್ರೀ–ರೂಪ–ಲೀಲಾ–ಧನ ವಿಭವ–ಮಹಾರಾಶಿಗಳ್
ನಿಲ್ಲವಾರ್ಗಂ॥

ಹಾಗಾದರೆ ಇದಕ್ಕೆ, ಉಪಾಯವಿಲ್ಲವೇ? ಎಂದಾಗ, ಇದೆ ಎಂದು ಜೈನಪುರಾಣಗಳು ಉತ್ತರಿಸುವುವು. ಮೇಲಿನ ಪದ್ಯದಲ್ಲಿ ಭರತಚಕ್ರವರ್ತಿಯೇ ಮುಂದೆ ಪ್ರಾರ್ಥಿಸುವುದೇನೆಂದರೆ:

...ಇವೆಲ್ಲಂ ಅಧ್ರುವಂ; ಬೇಟ್ಪೆಂತು ಬೇಳಲ್ವೆನ್ ಉ–
ತ್ತಮ ದೀಕ್ಷಾವಿಧಿಯುಂ, ಸಮಾಧಿಮರಣಂ,
ಕರ್ಮಕ್ಷಯಂ ಬೋಧಿಲಾ
ಭಮ್ ಅಮೋಘಂ, ದೊರೆಕೊಳ್ವುದು ಅಕ್ಕೆ ಎಮಗೆ,
ಮುಕ್ತಿ ಶ್ರೀ ಮನೋವಲ್ಲಭಾ॥

ಭಾರತೀಯ ಜೀವನದಲ್ಲಿ ಪುರುಷಾರ್ಥಗಳಿಗೆ ತುಂಬ ಮಹತ್ವವಿದೆ. ಅವು ಧರ್ಮ, ಅರ್ಥ, ಕಾಮ, ಮೋಕ್ಷವೆಂದು ನಾಲ್ಕು ವಿಧವಾಗಿರುವುವು ಎಂಬುದು ಎಲ್ಲರಿಗೂ ವಿದಿತವಾಗಿದೆ. ಆದರೆ ಅವುಗಳ ಬಗೆಗೆ ಇರುವ ಅಭೀಪ್ಸೆಯಲ್ಲಿ ಎಷ್ಟೋ ಅಂತರವಿದೆ. ಉದಾಹರಣೆಗೆ, ದಾರ್ಶನಿಕರು ಇವೆಲ್ಲವೂ ಉಪಾಸ್ಯವೆಂದು ಬಗೆದರೆ, ರಾಜನೀತಿಜ್ಞರು ಮೊದಲನೆಯ ಮೂರನ್ನೇ ಉಪಾಸಿಸಬಹುದು. ಅವರ ಉಪಾಸನೆಯಲ್ಲಿಯೂ

ಅಂತರವಿರಬಹುದು. ಹೇಗೆಂದರೆ ರಾಜನೀತಿಜ್ಞರಿಗೆ ಅರ್ಥವೇ ಪ್ರಧಾನವಾಗಿ ಅವರು ರಚಿಸುವ ಸಮಾಜದಲ್ಲಿ ಅದರ ಕಾಮನೆಯೇ ಧರ್ಮವಾಗಿದ್ದರೆ, ಧಾರ್ಮಿಕರಿಗೆ ಧರ್ಮವೇ ಮುಖ್ಯ ಅರ್ಥವಾಗಿ, ಆದರಿಂದ ಉಪಾದೇಯವಾದ ಮೋಕ್ಷವೇ ಅವರ ಕಾಮನೆಯಾಗಿರುವದು. ಪುರಾಣದಲ್ಲಿ ಭರತಚಕ್ರವರ್ತಿಯು ಇದನ್ನೇ ಬಹು ಅಲಂಕಾರಿಕವಾಗಿ ಹೇಳಿರುವುದು ಹೇಗೆಂದರೆ :

ಧರ್ಮಾರ್ಥ ಕಾಮವೆಂಬಿವು
ಧರ್ಮಾರ್ಥ ಜನಕ್ಕೆ ನೆಱೆದ ನೆರ್ಮಂತವಱೊಳ್ ।
ಧರ್ಮಂ ಪ್ರಧಾನಮರ್ಥಂ
ಧರ್ಮಾಂಘ್ರಿಪ ಫಳಮುದರ್ಕೆ ರಸಮದು ಕಾಮಂ ॥

ಜೀವನದಲ್ಲಿ ಧರ್ಮವೇ ಪ್ರಧಾನವಾದ ಅರ್ಥವು. ಧರ್ಮವೆಂಬ ವೃಕ್ಷದ ಫಲವು ಮೋಕ್ಷವು, ಆ ಫಲವನ್ನು ಪರಿಪಕ್ವ ಮಾಡುವ ಆ ವೃಕ್ಷದ ರಸವೇ ಕಾಮವು.[೧] ಪುರುಷಾರ್ಥ

---

೧ ಇಲ್ಲಿ ಕಾಮವೆಂದರೆ ರತಿ (ಸ್ಥಾಯೀ ಭಾವ) ಯಿಂದ ಉದ್ದೀಪನಗೊಳ್ಳುವ ಶೃಂಗಾರದ ರಸವಲ್ಲ; ಆದರೆ ಜೀವನದ ಅರ್ಥವು ಧರ್ಮವಾದುದರಿಂದ, ಅದನ್ನು ವೃಕ್ಷದಂತೆ ಬೆಳೆಯುವಂತೆ ಮಾಡಿ, ಅದರೊಳಗೆ ಮೋಕ್ಷವೆಂಬ ಹಣ್ಣನ್ನು ಪರಿಪಕ್ವಗೊಳಿಸುವ ರಸವು; ಎಂದರೆ, ಅದು ಮೋಕ್ಷಗಾಮಿಯಾದ ತತ್ತ್ವವು. ಅಂತೆಯೇ ತೀರ್ಥಂಕರರಂತೆ ಕಾಮದೇವರೂ ಮೋಕ್ಷಗಾಮಿಗಳೆಂದು ಜೈನಪುರಾಣಗಳು ಹೇಳುವವು.

ಗಳಲ್ಲಿ ಈ ಕಾಮವೂ ಅರ್ಥವೂ ಕೇವಲ ಸಾಧನಗಳಾಗಿರುವುವು, ಅವುಗಳಿಂದ ಸಾಧ್ಯವಾಗಬೇಕಾದ ಪರಮ ಪುರುಷಾರ್ಥಗಳೆಂದರೆ ಧರ್ಮ ಹಾಗೂ ಮೋಕ್ಷಗಳು.

ಈ ಪುರುಷಾರ್ಥಗಳನ್ನು ಸಾಧಿಸಲು ಮಾನವ ಜನ್ಮದಲ್ಲಿ ಯಷ್ಟೇ ಸಾಧ್ಯವಿರುವುದೆಂದು ಎಲ್ಲರೂ ಒಪ್ಪುವರು. ಸಂಸಾರ ದಲ್ಲಿ ಪ್ರವೃತ್ತಿಗಿಂತ ನಿವೃತ್ತಿಯಿಂದಲೇ ಧರ್ಮಾಚರಣೆಯು ಸುಗಮವಾಗುವುದೆಂಬುದು ಬಹುಜನರ ಅಭಿಪ್ರಾಯ-ವಿರುವುದು. ಆದರೆ, ಮಾನವಜನ್ಮವು ಪ್ರಾಪ್ತವಾದಾಗ ಈ ಧರ್ಮಾಚರಣೆಯು ಉತ್ಕಟವಾಗಿಯೂ, ತ್ರಿಕರಣಶುದ್ಧ-ವಾಗಿಯೂ, ಪರಮೋಚ್ಚವಾಗಿಯೂ ಸಾಗಬೇಕೆಂಬುದೇ ಜೈನ ಪುರಾಣಗಳ ಸಂದೇಶವಾಗಿರುವುದು.

ವೃಕ್ಷವು ಪಂಚಾಂಗಗಳಿಂದ ಯುಕ್ತವಾಗಿರುವಂತೆ. ಧರ್ಮವೂ ದಯೆ, ದಮ, ದಾನ, ತಪ ಹಾಗೂ ಶೀಲ ಎಂಬ ಐದು ಸ್ಕಂಧ (ಅಂಗ) ಗಳಿಂದ ಕೂಡಿರುವುದೆಂದೂ, ಅದೇ ಮನುಷ್ಯನನ್ನು ಮೋಕ್ಷದವರೆಗೆ ಮೇಲಕ್ಕೆತ್ತುವುದೆಂದೂ, ಇದನ್ನು ನಂಬಿ ಧರ್ಮಾಚರಣೆಗೆಯ್ಯುವುದೇ ಉಪಾದೇಯ ವೆಂದೂ, ಶ್ರೇಯಸ್ಕರವೆಂದೂ ಜೈನಪುರಾಣಗಳು ಪ್ರತಿಪಾದಿಸು ವುವು:

ಭವರಾಶಿ ನಿಮಗ್ನರಂ ದಯೆ-ದಮಂ-ದಾನಂ-ತಪಂ-ಶೀಲಂ ಎಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ; ಪೊತ್ತೆತ್ತುಗುಂ ಮುಕ್ತಿ ಪ-
ರ್ಯವಸಾನಂಬರಂ; ಆನುಷಂಗಿಕ ಫಲಂ ಭೂಪೇಂದ್ರ ದೇವೇಂದ್ರರಾ-
ಜ್ಯವಿಳಾಸಂ; ಪೆಱತಲ್ತು ನಂಬು; ಖಚರಕ್ಷ್ಮಾಪಾಲ ಚೂಡಾಮಣೀ॥

ಹೀಗೆ, ಸ್ವಯಂಬುದ್ಧನು "ಖಚರಕ್ಷ್ಮಾಪಾಲ ಚೂಡಾಮಣಿ"ಯಾದ ಮಹಾಬಳನಿಗೆ ಬೋಧಿಸಿದ ಈ ಧರ್ಮೋಪದೇಶದಿಂದಲೇ ಅವನು ಎಚ್ಚೆತ್ತು ಮುಂದೆ ಹತ್ತನೆಯ ಭವದಲ್ಲಿ ತೀರ್ಥಂಕರನಾದನು. ಮಹಾಕವಿ ಪಂಪನು ಸ್ವಯಂಬುದ್ಧನ ಬಾಯಿಯಿಂದ ಘೋಷಿಸಿದ ಈ ಅಮೃತ ವಾಣಿಯಲ್ಲಿ ಜೈನ ಪುರಾಣಗಳ ಶ್ರೇಷ್ಠವಾದ ಸಂದೇಶವು ಅಡಕವಾಗಿರುವುದೆಂದರೆ ತಪ್ಪಾಗಲಾರದಷ್ಟೆ?

ಈ ದೃಷ್ಟಿಯಿಂದ ವಿಚಾರಮಾಡಿದರೆ, ಜೈನಪುರಾಣಗಳು ಜಗತ್ತಿನ ಸಾಹಿತ್ಯಕ್ಕೂ ಅಭ್ಯುದಯಕ್ಕೂ ಮಹತ್ವವಾದ ಕಾಣಿಕೆಗಳನ್ನು ಸಲ್ಲಿಸಿರುವುವೆಂದು ಧೈರ್ಯದಿಂದ ಹೇಳಬಹುದು. ಆದರ್ಶ ಸಾಹಿತ್ಯವು ಉಚ್ಚತಮವಾದ ಜೀವನದ ಅಭಿವ್ಯಕ್ತಿಗೆ ನಿತಾಂತ ಸ್ಫೂರ್ತಿಯೂ ಆಗರವಾಗಬಲ್ಲುದೆಂಬ ಸತ್ಯವನ್ನು ಪ್ರಾಚೀನ ಜೈನಜೀವನದ ಸ್ಮೃತಿಚಿತ್ರಗಳು ಜಗತ್ತಿಗೇ ಸಾರಿ ಹೇಳುತ್ತಿರುವುವು.

———

# ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧ ಕನ್ನಡದಲ್ಲಿ ತ್ರಿಪದಿ ಸಾಹಿತ್ಯ —ಎಸ್. ಎಸ್. ಕೋಟಿನ
೨ ಕನ್ನಡ ಸಾಹಿತ್ಯದಲ್ಲಿ ದುರಂತ ದೃಷ್ಟಿ —ಎಚ್. ಜಿ. ಲೋಕೂರ
೩ ದ್ರಾವಿಡ ಭಾಷೆಗಳು —ಸಂಗಮೇಶ ಸವದತ್ತಿಮಠ
೪ ಪೋಲಿಯೋ ಮೈಲೈಟಿಸ್ —ಎಸ್. ಜಿ. ನಾಗಲೋಟಿಮಠ
೫ ಕಾರ್ಮಿಕರ ಸಮಸ್ಯೆಗಳು —ಎಸ್. ಜಿ. ಕರಭಂಟನಾಳ
೬ ಅನುಭಾವಿ ಕವಿ ಕಡಕೋಳ ಮಡಿವಾಳಪ್ಪ —ಲಿಂಗಣ್ಣ ಸತ್ಯಂಪೇಟೆ
೭ ಅಣಬೆಗಳು —ಎಂ. ಎಸ್. ಎಸ್. ರಾವ್
೮ ಜಗನ್ನಾಥ ದಾಸರ ಹಿರಿಮೆ —ವಸಂತ ಕುಷ್ಟಗಿ
೯ ಕಿವಿ, ಮೂಗು, ಗಂಟಲಿನ ಸಾಮಾನ್ಯ ರೋಗಗಳು —ಎಂ. ವ್ಹಿ. ವೆಂಕಟೇಶಮೂರ್ತಿ
೧೦ ಭಾರತೀಯ ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳು —ಎಸ್. ವಾಯ್. ಗುಬ್ಬಣ್ಣವರ

---

ವ್ಯಾಸಂಗ ವಿಸ್ತರಣ—ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦೦೦೩.